

ತನು ನಿಮ್ಮದೆಂದ ಬಳಿಕ
ಎನಗೆ ಬೇರೆ ತನುವಿಲ್ಲ
ಮನ ನಿಮ್ಮದೆಂದ ಬಳಿಕ
ಎನಗೆ ಬೇರೆ ಮನವಿಲ್ಲ
ಧನ ನಿಮ್ಮದೆಂದ ಬಳಿಕ
ಎನಗೆ ಬೇರೆ ಧನವಿಲ್ಲ
ಇಂತೀ ತ್ರಿವಿಧವೂ
ನಿಮ್ಮದೆಂದರಿದ ಬಳಿಕ
ಎನಗೆ ಬೇರೆ ವಿಚಾರವುಂಟೇ
ಕೂಡಲಸಂಗಮ ದೇವಾ,

—ಬಸವಣ್ಣನವರು.

# ಶ್ರೀ ವೆಂಕಟೇಶ್ವರಸ್ವಾಮಿದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಆರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ;

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟನ್ನೇ ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರುವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಆರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ
  (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾರಿಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ

ಬರೆಯಿರಿ:

**ಕಾರ್ಯನಿರ್ವಹಣಾಧಿಕಾರಿ**

ತಿ. ತಿ. ದೇ. ತಿರುಪತಿ.




ಗೌರವ ಸಂಪಾದಕರು:
ಎಸ್. ಲಕ್ಷ್ಮೀನಾರಾಯಣ ಐ.ಎ.ಎಸ್.,

ಸಂಪಾದಕ:
ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ:
ಕೆ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ:
ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**


ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. -ಸಂ॥


ಸಂಪುಟ ೧೬] ಮಾರ್ಚ್ ೧೯೮೬ [ಸಂಚಿಕೆ ೧೦


# ವಿಷಯಸೂಚಿ



ಮುಖಚಿತ್ರ: ಹರಹರನಾಥ ಚಿತ್ರ ಕೆ. ಜಗದೀಶ್.
ಹಿಂಬದಿಯಲ್ಲಿ: ಶ್ರೀಕಪಿಲೇಶ್ವರಸ್ವಾಮಿ ಆಲಯ ಪ್ರಾಂಗಣ ಚಿತ್ರ.
ಒಳಗಡೆ: ತಿರುಪತಿಯಲ್ಲಿ ಆಂಧ್ರ ಪ್ರದೇಶದ ಗೌರ್ನರ್ ಶ್ರೀಮತಿ ಕುಮುದ್‌ಬೆನ್ ಜೋಷಿ ಅವರು ಅರಣ್ಯಾಭಿವೃದ್ಧಿ ಕಾರ್ಯಕ್ರಮದಲ್ಲಿ. ಹಾಗೂ ಶ್ರೀಗೋವಿಂದರಾಜ ಸ್ವಾಮಿ ಪ್ರಾಥಮಿಕೋನ್ನತ ಪಾಠಶಾಲಾವಾರ್ಷಿಕೋತ್ಸವ.

# ಸಂಪಾದಕೀಯ

ದೇಹಿ-ದೇಹ-ಒಂದೋ ಎರಡೋ? ಈ ಚರ್ಚೆ ಅನಾದಿಯಾಗಿ ನಡೆಯುತ್ತಲೇ ಇದೆ. ಅಧ್ಯಾತ್ಮವಿದರು ದೇಹದೊಳಗಿದ್ದರು-'ಮನೆಯೊಳಗೆ ಮನೆಯೊಡೆಯ'ನಿದ್ದರೂ-ಬೇರೆ ಬೇರೆ ಎಂದರು. ಅತಿವಾಸ್ತವಿಕವಾದಿಗಳು, ದೇಹಿ ದೇಹ ಒಂದೇ ಎಂದೂ, ದೈಹಿಕ ಪರಿಣಾಮಗಳ ದೆಸೆಯಿಂದ ಈ ದೇಹಗೇಹ ಕೆಲಸಕ್ಕೆ ಬಾರದಾಗುತ್ತದೆಯೆಂದೂ-ಆ ಜೀರ್ಣಶೀರ್ಣ ಸ್ಥಿತಿಯನ್ನೇ ನಮ್ಮ ಸಾಮಾನ್ಯ ಭಾಷೆಯಲ್ಲಿ ಮೃತ್ಯುವೆನ್ನುವರೆಂದೂ ವಾದಿಸುತ್ತ ಬಂದರು. ಆದರೆ, ಚರಾಚರ ಜಗತ್ತಿನಲ್ಲಿ ವಸ್ತುತತ್ತ್ವ ಪ್ರತಿಭಾಸಕವಾದ ಒಂದು ಕಳೆಯಿದೆಯೆಂದೂ ಆ ಕಳೆಯನ್ನೇ ಜೀವವೆನ್ನುವರೆಂದೂ, ಅದು ಅಂತರ್ನಿಹಿತವಾಗಿದ್ದುಕೊಂಡು ಆಡಿಸುವವರೆಗೆ ಶಿವವೂ, ಶಿವಕರವೂ, ಶಿವತಮವೂ ಆಗಿ, ಆ ಕಳಾರಹಿತವಾದಾಗ ಜಡವಾಗಿ, ಧೂಳಿನಲ್ಲಿ ಕಲಿಬೆರೆಯುತ್ತದೆ ಎಂಬುದನ್ನು ಗುರುತಿಸಿದರೆ ಮನೆಯೂ ಮನೆಯೊಡೆಯನೂ ಒಂದೇ ಎಂದುಕೊಳ್ಳುವುದು ಕಷ್ಟ. ಹೀಗೆ ಈ ಜೀವತತ್ತ್ವ ವಸ್ತ್ವೇತರವಾಗಿ ವಿಶ್ವವ್ಯಾಪಿಯಾಗಿ ಇರುವುದರಿಂದಲೇ ಆ ಸರ್ವಾಂತರ್ಯಾಮಿತ್ವವನ್ನು ಶಿವಪರವಾಗಿ, ಕೇಶವಪರವಾಗಿ, ಅನ್ವಯಿಸಿಕೊಂಡು ಆರಾಧನೆ ಮಾಡಿದರು. ದೇಹಾತಿರಿಕ್ತವಾದ ಶುದ್ಧ ಚೈತನ್ಯ ಒಂದೇ ಎಂದೂ ಉಪಾಧಿಭೇದದಿಂದ ವಸ್ತುಬಾಹುಳ್ಯವಾಗಿ ಆಭಾಸಿಸುತ್ತಿದೆಯೆಂದೂ ಭಾವಿಸಿದರು. ಎಂತಲೇ ಹರಿಹರ ತತ್ತ್ವಗಳಲ್ಲಿ ಯಾವುದನ್ನು ಸಂಭಾವಿಸಿದರೂ ಸರ್ವವ್ಯಾಪಕ ಚೈತನ್ಯದಲ್ಲಿ ಸ್ವಾರೋಪಣೆಯಿಂದ ಆಧ್ಯಾತ್ಮಿಕ ಸಂದೇಶವನ್ನು, ಲೌಕಿಕ ವ್ಯವಸ್ಥೆಗಳಿಗಾಗಿ ಸಮತಾಧರ್ಮವನ್ನು, ಪ್ರವಚನಗೊಳಿಸಿ ಪ್ರವಹಿಸುವಂತೆ ಮಾಡಿದರು.

ಯಜುರ್ವೇದೀಯ ಶತರುದ್ರೀಯದಲ್ಲಿನ ನಮಕಭಾಗದಲ್ಲಿ ಚರಾಚರ ವಿಶ್ವದ ವಿವಿಧ ಧರ್ಮಗಳ-ಕರ್ಮಗಳಿಗೆ ಪ್ರಾತಿನಿಧ್ಯವಹಿಸುವ ದೇವತಾರೂಪ ಪರತತ್ತ್ವ ಪ್ರಣಾಮದೊಡನೆ ವಿಶಾಲ ಸೃಷ್ಟಿಯ ಜೀವಜಾಲವೆಲ್ಲದರ ಬಗ್ಗೆ ಗೌರವ ಪ್ರಕಟನೆ ಕಂಡು ಬರುತ್ತದೆ. ಇನ್ನು ಚಮಕಭಾಗದ ಮಂತ್ರಗಳು ಚಲಾಚಲ ವಸ್ತು ಧರ್ಮಗಳೆಲ್ಲ ತನ್ನಲ್ಲಿ ಅಧ್ಯಾರೋಪಿತವಾಗಬೇಕೆಂಬ ಕಾಂಕ್ಷೆಯನ್ನೂ ಪ್ರತಿಬಿಂಬಿಸುತ್ತವೆ. ಎಂದರೆ ಲೌಕಿಕವಾದ ಸ್ವಸುಖದೊಂದಿಗೆ ಪರಹಿತಕಾಮನೆ ಈ ಮಂತ್ರಭಾಗದ ಮುಂಗೈಯ್ಯ ಕಂಕಣ.

ಹಾಗೆಯೇ ಮಹಾವಿಷ್ಣು ಪಾರಮ್ಯವನ್ನು ಬೋಧಿಸುವ ವಿಷ್ಣು ಸಹಸ್ರನಾಮದಲ್ಲಿ ಪರಮಾತ್ಮನ ಅನಂತಮೂರ್ತತ್ತ್ವ ಗೋಚರವಾಗುತ್ತದೆ. ಭಗವದ್ಗೀತೆಯಲ್ಲಿ ಪುರುಷೋತ್ತಮನು ಸರ್ವಕಳಾಮಯ ವಿಶ್ವದಲ್ಲಿ ಸ್ವಕಳಾಪ್ರಕಾಶ ಎಲ್ಲೆಲ್ಲಿದೆಯೆಂಬುದನ್ನು ಪ್ರಸ್ಫುಟಗೊಳಿಸಿದ್ದಾನೆ.

ಪರಹಿತಕ್ಕಾಗಿ ಪ್ರಯತ್ನ ಪಡುತ್ತಾ ನಿಗ್ರಹವೇ ವಿಗ್ರಹವಾದ ವೀತರಾಗನಿಗೆ ಕೈವಲ್ಯ ಕರತಲಾಮಲಕವೆಂಬುದು "ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವ ಚ'' ಮುಂತಾದ ಶ್ಲೋಕಗಳು ನಿರೂಪಿಸುತ್ತವೆ'.

ನಿಜವೆಂದರೆ ಒಂದೇ ಪರತತ್ತ್ವದ ಬಹುಮುಖ ಸಮಾರಾಧನೆಯನ್ನೇ ಪರಶಿವನು ಸಾಕಾರವಾಗಿ ಬೋಧಿಸಿದ. ಪುರುಷೋತ್ತಮನು ಗೀತೆಯಾಗಿ ಪ್ರವಚಿಸಿದ್ದೂ ಇದನ್ನೇ. 'ಅದೇ ಬ್ರಹ್ಮ, ಅದೇ ಶಿವ, ಅದೇ ವಿಷ್ಣು, ಅದೇ ಇಂದ್ರ, ಕೊನೆಗೆ ಅಕ್ಷರವಾದ ಪರಮಸ್ವರೂಪವೂ ಸಹ ಆ ಶಾಶ್ವತ ಸತ್ಯವೇ'.

ಹಾಗಾಗಿ ಪುರುಷೋತ್ತಮ ಪ್ರತಿಪಾದಿತವಾದ ಶಿವಧರ್ಮವನ್ನು ಶಿವರಾತ್ರಿಯ ಮಹಾಪರ್ವ ದಿನದಂದು ಹೀಗೆ ಹೇಳಿಕೊಳ್ಳಬಹುದು.

ಕಿಮಸ್ಥಿಮಾಲಾಂ ಕಿಂ ಕೌಸ್ತುಭಂ ವಾ
ಪರಿಷ್ಕ್ರಿಯಾಯಾಂ ಬಹುಮನ್ಯಸೇತ್ವಮ್ ||
ಕಿಂ ಕಾಲಕೂಟಃ ಕಿಂ ವಾ ಯಶೋದಾಸ್ತನ್ಯಂ
ತವ ಸ್ವಾದು ವದ ಪ್ರಭೋ ಮೇ ||

ಓಂ ಶಾಂತಿಶ್ಶಾಂತಿಶ್ಶಾಂತಿಃ

# ಸಂಸ್ಕೃತ ಸುಭಾಷಿತ ಸಂಗ್ರಹಗಳು

ಸುಭಾಷಿತವೆಂದರೆ ಒಳ್ಳೆಯ ಮಾತು, ನಲ್ನುಡಿ, ಅದು ಯಾವುದಾದರೂ ಆಗಬಹುದು. ಒಂದು ವಸ್ತುವನ್ನು ವರ್ಣಿಸಬಹುದು ಒಂದು ಸನ್ನಿವೇಶವನ್ನು ಚಿತ್ರಿಸಬಹುದು. ಒಂದು ಭಾವವನ್ನು ವ್ಯಕ್ತಪಡಿಸಬಹುದು. ಪ್ರಪಂಚದ ಅನುಭವವನ್ನು ಸೂಕ್ತ ರೀತಿಯಲ್ಲಿ ಆಕರ್ಷಕವಾಗಿ ಹೇಳಬಹುದು. ಇವೆಲ್ಲ ಸುಭಾಷಿತಗಳೇ. ಇದನ್ನು ಸೂಕ್ತಿ, ಸದುಕ್ತಿ ಎಂದೂ ಕರೆಯಬಹುದು. ಇವು ಸಂಗ್ರಹರೂಪದಲ್ಲಿರುತ್ತವೆ. ಪದ್ಯರೂಪದಲ್ಲಿರುವುದೇ ಹೆಚ್ಚು! ಇವು ಪರಂಪರೆಯಾಗಿ ಜನಗಳಲ್ಲಿ ಬಳಕೆಯಲ್ಲಿರುವ ಮಾತುಗಳಿಂದ ಅಥವಾ ಕಾವ್ಯ, ನಾಟಕಗಳಿಂದ ಆರಿಸಿಬಂದವಾಗಿರುತ್ತವೆ. ಆದರೆ ಅವು ಸ್ವಯಂಪೂರ್ಣವು.

ಇಂತಹ ಸುಭಾಷಿತಗಳು ಸಾಮಾನ್ಯವಾಗಿ ಎಲ್ಲ ಭಾಷೆಗಳಲ್ಲಿಯೂ ಇರುತ್ತವೆ. ಆದರೆ ಅವು ಬಹು ನಿಷ್ಪಕ್ಷಪಾತವಾದ ದೃಷ್ಟಿಯಿಂದ ಸಂಗ್ರಹೀತವಾಗಿರಬೇಕು. ಒಂದು ರೀತಿಯ ಸಾಹಿತ್ಯದ ಭಾಗವಾಗಿರಬೇಕು. ಅಥವಾ ಒಂದು ಕಾಲದ ಕಾವ್ಯಗಳಿಂದ ಅಥವಾ ಒಂದು ಕವಿಯ ಕೃತಿಗಳಿಂದ ಒಂದೇರೀತಿಯ ವಿಷಯಕ್ಕೆ, ಕಾಲಕ್ಕೆ ಸೇರಿದವುಗಳಾಗಿರಬೇಕು. ಸಂಸ್ಕೃತದಲ್ಲಿ ಯಾವ ಕಾಲನಿಯಮವೂ ಇಲ್ಲದೆ ಸಾಹಿತ್ಯದ ಉತ್ತಮ ಭಾಗಗಳನ್ನು ಸಂಗ್ರಹಿಸಿದ್ದಾರೆ. ಇವು ಸ್ವಯಂ ಪೂರ್ಣವಾಗಿರುತ್ತವೆ. ಇವುಗಳನ್ನು ಸೂಕ್ತಿ ಎಂದು ಕರೆಯುತ್ತಾರೆ.

ಇವುಗಳನ್ನೆಲ್ಲಾ ಒಟ್ಟುಗೂಡಿಸಿ ಸವಿಯುವುದಕ್ಕೆ ಅನುಕೂಲಪಡಿಸುವುದಕ್ಕಾಗಿ ಸಂಗ್ರಹಗಳ ಸಂಕಲಿತವಾಗಿವೆ. ಅವುಗಳಿಗೆ ವಿಷಯ, ಸನ್ನಿವೇಶ, ರಸಗಳ ಮಿತಿಯಿಲ್ಲ. ಜೀವನಕ್ಕೆ ಸಂಬಂಧಪಟ್ಟ ಎಲ್ಲ ವಿಷಯಗಳ ಮೇಲೂ ಕೃತಿರಚನೆ ಮಾಡಿದ್ದಾರೆ. ಅವುಗಳಲ್ಲಿ ಕೆಲವು ಜೀವನಾನುಭವವನ್ನು ಚಮತ್ಕಾರವಾದ ಮಾತುಗಳಿಂದ ಪ್ರಭಾವಶಾಲಿಯಾಗುವ ಹಾಗೆ ಸಂಗ್ರಹವಾಗಿ ಹೇಳುವ ನುಡಿಕುಚ್ಚುಗಳು ಮತ್ತು ಕೆಲವು ಮಾನವ ಹೃದಯದಲ್ಲಿ ಅನಂತವಾಗಿ ಹುಟ್ಟುವ ಭಾವಗೀತೆಗಳು. ಆದರೂ ಅವೆಲ್ಲ ದೇಶಕಾಲಾಬಾಧಿತವಾದ ನಿತ್ಯಸತ್ಯಗಳು.

ಸುಭಾಷಿತಗಳಲ್ಲಿ ಬಹುಕಾಲದ ಆಳವಾದ ಅನುಭವವಿದೆ. ಜೀವನದ ಸಿಹಿ ಕಹಿಗಳ, ಗುಣಾವಗುಣಗಳ, ಧ್ಯೇಯಾದರ್ಶಗಳ, ಒಲವುನಲಿವುಗಳ ಸಂಗ್ರಹವನ್ನು ಕಾಣಬಹುದು. ಆದರೆ ಅವು ಅಪಾರವೂ ವಿವಿಧ ರೂಪದವೂ ಆಗಿರುತ್ತವೆ. ಅಲ್ಲದೆ ಉದಾತ್ತಭಾವಗಳ ಪ್ರತೀಕವೂ ಆಗಿರುತ್ತವೆ. ಅವುಗಳಲ್ಲಿ ಕವಿಯು ಶ್ರಮಿಸಿ ಉತ್ತಮ ಭಾಗವನ್ನು ಪ್ರದರ್ಶಿಸಿರುತ್ತಾನೆ. ವಕ್ರೋಕ್ತಿ, ಅನ್ಯೋಕ್ತಿ, ಕಟಕಿ, ಹಾಸ್ಯ, ಖಂಡನ, ಮಂಡನ, ವಿಡಂಬನ ಮೊದಲಾದುವುಗಳನ್ನೆಲ್ಲಾ ಅಲ್ಲಿ ಕಾಣಬಹುದು.

ಈ ಸಂಗ್ರಹಗಳಿಂದ ನಮಗೆ ವಿವಿಧ ಲಾಭಗಳುಂಟು. ಅವು ತಾತ್ಕಾಲಿಕವಾಗಿ ಮನರಂಜನೆಯನ್ನು ಉಂಟುಮಾಡುತ್ತವೆ. ಆದರ ಕರ್ತೃಗಳ ಆಚಾರ ವಿಚಾರಗಳನ್ನು ಅವರ ಕಾಲದೇಶಗಳ

ಖಿನ್ನಂ ಚಾಪಿ ಸುಭಾಷಿತೇನ ರಮತೇ ಸ್ವೀಯಂ ಮನಸ್ಸರ್ವದಾ
ಶ್ರುತ್ವಾನ್ಯಸ್ಯ ಸುಭಾಷಿತಂ ಖಲು ಮನಃ ಶ್ರೋತುಂ ಪುನರ್ವಾಂಛತಿ ।
ಅಜ್ಞಾನ್ ಜ್ಞಾನವತೋಽಪ್ಯನೇನ ಹಿ ವಶೀಕರ್ತುಂ ಸಮರ್ಥೋ ಭವೇತ್
ಕರ್ತವ್ಯೋಹಿ ಸುಭಾಷಿತಸ್ಯ ಮನುಜೈರಾವಶ್ಯಕಃ ಸಂಗ್ರಹಃ ॥

ತನ್ನ ಮನಸ್ಸು ಖಿನ್ನವಾಗಿದ್ದರೂ ಸಹ ಸುಭಾಷಿತದಿಂದ ಉಲ್ಲಾಸಗೊಳ್ಳುವುದು. ಮತ್ತೊಬ್ಬರ ನಲ್ನುಡಿಯನ್ನು ಕೇಳಿದ ಮನಸ್ಸು ಮತ್ತೆ ಅದನ್ನೇ ಕೇಳಲು ಬಯಸುತ್ತದೆ. ಜ್ಞಾನಿಗಳನ್ನೂ ಅಜ್ಞಾನಿಗಳನ್ನೂ ಇದರಿಂದ ವಶಪಡಿಸಿಕೊಳ್ಳಬಹುದು. ಆದುದರಿಂದ ಮನುಷ್ಯರು ಸುಭಾಷಿತಗಳನ್ನು ಅವಶ್ಯಕವಾಗಿ ಶೇಖರಿಸಿಕೊಳ್ಳಬೇಕು.

ದ್ರಾಕ್ಷಾ ಮ್ಲಾನಮುಖೀ ಜಾತಾ ಶರ್ಕರಾ ಚಾಶ್ಮತಾಂಗತಾ ।
ಸುಭಾಷಿತ ರಸಸ್ಯಾಗ್ರೇ ಸುಧಾ ಭೀತಾ ದಿವಂಗತಾ ॥

ಸುಭಾಷಿತದ ರಸದ ಮುಂದೆ ದ್ರಾಕ್ಷಿಯು ಬಾಡಿತು, ಸಕ್ಕರೆಯು ಕಲ್ಲಾಯಿತು, ಅಮೃತವು ಹೆದರಿ ಸ್ವರ್ಗಕ್ಕೆ ಹೊರಟುಹೋಯಿತು.

ನಾಯಂ ಪ್ರಯಾತಿ ವಿಕೃತಿಂ ವಿರತೋ ನಯಸ್ಯಾತ್
ನ ಕ್ಷೀಯತೇ ಬಹು ಜನೈರ್ನಿತರಾಂ ನಿಪೀತಃ ।
ಜಾಡ್ಯಂ ನಿಹಂತಿ ರುಚಿಮೇತಿ ಕರೋತಿ ತೃಪ್ತಿಂ
ನೂನಂ ಸುಭಾಷಿತ ರಸೋಽಸ್ಯ ರಸಾತಿಶಾಯೀ ॥

ಪಾನಕ, ಹಾಲು, ಮೊದಲಾದ ಪಾನೀಯಗಳು ಕೆಟ್ಟುಹೋಗುವುದುಂಟು, ಬೇಸರವನ್ನುಂಟುಮಾಡಬಹುದು, ಕಡಿಮೆಯಾಗುತ್ತವೆ. ಆದರೆ ಸುಭಾಷಿತ ರಸವು ಎಂದಿಗೂ ಕೆಡುವುದಿಲ್ಲ: ರುಚಿ ಕಡಿಮೆಯಾಗುವುದಿಲ್ಲ. ಅನೇಕರು ಹೆಚ್ಚು ಹೆಚ್ಚಾಗಿ ಕುಡಿದರೂ ಕಡಿಮೆಯಾಗುವುದಿಲ್ಲ. ಅಲ್ಲದೆ ಲವಲವಿಕೆಯನ್ನು ಉಂಟುಮಾಡುತ್ತದೆ. ರುಚಿಯನ್ನುಂಟುಮಾಡುತ್ತದೆ, ತೃಪ್ತಿಯನ್ನುಂಟುಮಾಡುತ್ತದೆ, ಹೀಗೆ ಸುಭಾಷಿತವು ಮಿಕ್ಕೆಲ್ಲ ರಸಗಳನ್ನು ಮೀರಿಸುತ್ತದೆ.

ತ್ರೀಣಿ ರತ್ನಾನಿ ಲೋಕೇಸ್ಮಿನ್ ಜಲಮನ್ನಂ ಸುಭಾಷಿತಂ ।
ಮೂಢೈಃ ಪಾಷಾಣಖಂಡೇಷು ರತ್ನ ಸಂಜ್ಞಾ ವಿಧೀಯತೇ ॥

ಭೂಮಿಯಲ್ಲಿ ಸರ್ವ ಶ್ರೇಷ್ಠವಾದ ರತ್ನಗಳು ಕೇವಲ ಮೂರೇ–ಜಲ, ಆಹಾರ, ಮತ್ತು ಸುಭಾಷಿತಗಳು. ಆದರೆ ಮೂಢರು ಕಲ್ಲಿನ ಚೂರನ್ನು ರತ್ನವೆಂದು ಕರೆಯುತ್ತಾರೆ.

ಡಾ॥ ಎನ್. ಅನಂತರಂಗಾಚಾರ್

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ | |
|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ ಪ್ರಾ 7–30 | ಪ್ರಾ 8–30 |
| | | | ಸಮರ್ಪಣ ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ | | | | |
| 2ನೇ ಗಂಟೆ | ಪ್ರಾ 10–00 | ಪ್ರಾ 10–30 | ಪ್ರಾ 9–30 | ಪ್ರಾ 10–30 |
| *ಅರ್ಜಿತ ಕಲ್ಯಾಣೋತ್ಸವ | | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | ರಾ 8–45 | ರಾ 9–00 |

| | |
|---|---|
| *ಅರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ವರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

ಅರಿವನ್ನು ತಿಳಿಯಪಡಿಸುತ್ತವೆ. ಕವಿ ಮತ್ತು ಕಾವ್ಯಗಳು ಉತ್ತಮವಲ್ಲದಿದ್ದರೂ ಅವುಗಳ ಉತ್ತಮ ಭಾಗವನ್ನು ಸಂಗ್ರಹಗಳಲ್ಲಿ ಸೇರಿಸಿರುವುದುಂಟು.

ಸಂಸ್ಕೃತದಲ್ಲಿ ಸುಭಾಷಿತಗಳ ಸಂಗ್ರಹಕಾರ್ಯ ಪ್ರಾರಂಭವಾದುದು ಸುಮಾರು ಹತ್ತನೆಯ ಶತಮಾನದಲ್ಲಿ. ಅದಕ್ಕೆ ಹಿಂದೆ ಸುಭಾಷಿತಗಳ ಕಾರ್ಯವನ್ನು ನೈತಿಕ ಮತ್ತು ಉಪದೇಶಾತ್ಮಕ ಕಾವ್ಯಗಳು ಮಾಡುತ್ತಿದ್ದವು. ಆದಿಕಾಲದಿಂದ ಅಂತಹ ಕಾವ್ಯಗಳು ಅನೇಕವು ರಚಿತವಾಗಿವೆ. ಅವುಗಳಲ್ಲಿ ಧರ್ಮ ಮತ್ತು ತತ್ತ್ವಸ್ವರೂಪ, ಜನ್ಮಾಂತರ ಫಲದಿಂದುಂಟಾಗುವ ಸುಖದುಃಖಗಳು, ದುಃಖಪರಿಹಾರಕ್ಕಾಗಿ ಅನುಸರಿಸಬೇಕಾದ ಸತ್ಯಾನ್ವೇಷಣೆಯ ಮಾರ್ಗ, ಜೀವನದಲ್ಲಿ ಸುಖದುಃಖಗಳ ಸ್ಥಾನ, ಪ್ರಗತಿಮಾರ್ಗದಲ್ಲಿ ಸದ್ಗುಣ ದುರ್ಗುಣಗಳ ಬೆಲೆ, ಸಮಾಜದ ಮೇಲೆ ಶಿಷ್ಟ ಮತ್ತು ದುಷ್ಟರ ಪ್ರಭಾವ, ಯೋಗ್ಯಜೀವನಕ್ಕೆ ಕರುಣೆ, ದಯೆ, ಸಹಿಷ್ಣುತೆ, ಸಹಾನುಭೂತಿ ಮೊದಲಾದುವುಗಳ ಅವಶ್ಯಕತೆ–ಮೊದಲಾದುವು ವರ್ಣಿತವಾಗಿರುತ್ತವೆ. ಹಾಗೆಯೇ ತ್ಯಾಗ ವೈರಾಗ್ಯಗಳು ಬಹುಮಟ್ಟಿಗೆ ಸ್ತುತ್ಯವಾಗಿವೆ. ಮೈತ್ರಿ, ಪಾತಿವ್ರತ್ಯ, ಸ್ವಾರ್ಥ–ತ್ಯಾಗ ಇವು ವಿಶೇಷವಾಗಿ ಆದರಣೀಯವಾಗಿವೆ. ಅಂತೆಯೇ ದುಷ್ಟವೃತ್ತಿಗಳಿಗೆ ಕಾರಣವಾದುವುಗಳೆಲ್ಲ ತೀವ್ರವಾಗಿ ಖಂಡಿಸಲ್ಪಟ್ಟಿವೆ. ಆದುದರಿಂದ ಅವುಗಳು ನಿರ್ದಾಕ್ಷಿಣ್ಯವಾಗಿ ಅವಹೇಳನ ಮಾಡಲ್ಪಟ್ಟಿವೆ. ಕಷ್ಟ ಕಾರ್ಪಣ್ಯಗಳು, ದಾರಿದ್ರ್ಯದ ದುಷ್ಪರಿಣಾಮಗಳು ವಿಶದವಾಗಿ ವಿವರಿಸಲ್ಪಟ್ಟಿವೆ. ವಿಧಿಯ ಅಪರಿಹಾರ್ಯವಾದ ವಿಲಾಸಗಳು ಉದಾಹರಣೆಯ ಮೂಲಕ ಸ್ಪಷ್ಟೀಕೃತವಾಗಿವೆ. ಇದರೂ ಪುರುಷ ಪ್ರಯತ್ನಕ್ಕೆ ಸೂಕ್ತಸ್ಥಾನವು ಸೂಚಿತವಾಗಿವೆ. ಆದುದರಿಂದ ಧರ್ಮ, ನೀತಿ, ತತ್ತ್ವ, ರಾಜಧರ್ಮ– ಇವೆಲ್ಲ ಈ ಕ್ಷೇತ್ರಕ್ಕೆ ಸಂಬಂಧಪಟ್ಟ ವಸ್ತುಗಳು. ಇವುಗಳ ಸೌಂದರ್ಯ, ಆಕಾರ, ಗುಣಗಳ ಅಭಿವೃದ್ಧಿಗೆ ಬೌದ್ಧ, ಜೈನ, ಶೈವ, ವೈಷ್ಣವ ಪಂಥಗಳು ವಿಶೇಷ ಪ್ರಯತ್ನ ಪಟ್ಟಿವೆ.

ಈ ವರ್ಗಕ್ಕೆ ಸೇರಿದವು ಸುಂದರ ಪಾಂಡ್ಯನ 'ನೀತಿ ದ್ವಿಷಷ್ಟಿಕಾ', ಶಾಂತಿದೇವನ 'ಬೋಧಿಸತ್ತ್ವಾವತಾರ', ಭರ್ತೃಹರಿಯ ಶತಕತ್ರಯ, ಘಟಕರ್ಪರ, ವರರುಚಿ, ವೇತಾಲಭಟ್ಟರಿಂದ ಕ್ರಮವಾಗಿ ರಚಿಸಲ್ಪಟವೆಂದು ಅಂಗೀಕೃತವಾಗಿರುವ 'ನೀತಿಸಾರ', 'ನೀತಿರತ್ನ', 'ನೀತಿಪ್ರದೀಪ'ಗಳು, ಶಂಕರಾಚಾರ್ಯರ 'ಮೋಹ ಮುದ್ಗರ', ದಾಮೋದರನ 'ಕುಟ್ಟನೀಮತಾ', ಅಮಿತಗತಿಯ 'ಸಭಾಷಿತ ಸಂದೋಹ', ಕ್ಷೇಮಚಂದ್ರನ 'ಚಾರುಚರ್ಯ', ಜಲ್ಹಣನ 'ಮುಗ್ಧೋಪದೇಶ', ವೇದಾಂತ

ದೇಶಿಕರ 'ಸುಭಾಷಿತ ನೀವೀ', ಕುಸುಮ ದೇವನ 'ದೃಷ್ಟಾಂತಶತಕ', ಸ್ವಾದ್ವಿವೇದನ'ನೀತಿಮಂಜರಿ' ಜಗನ್ನಾಥ ಪಂಡಿತನ 'ಭಾಮಿನೀವಿಲಾಸ' ನೀಲ ಕಂಠ ದೀಕ್ಷಿತನ 'ವೈರಾಗ್ಯಶತಕಾದಿ' ನಾಲ್ಕು ಗ್ರಂಥಗಳೂ, ವೆಂಕಟಾಧ್ವರಿಯ 'ಸುಭಾಷಿತ ಕೌಸ್ತುಭ' ಮೊದಲಾದ ಕೆಲವು ಕೃತಿಗಳು. ಇವು ಗಳಷ್ಟು ವಿವಿಧ ವಿಷಯಗಳನ್ನು ಕುರಿತ ನೀತಿಗ್ರಂಥ ಗಳು ಇನ್ನೂ ಅನೇಕ ಗ್ರಂಥಗಳಿವೆ. ಇವುಗಳ ನ್ನೆಲ್ಲಾ ಅಭ್ಯಾಸಮಾಡುವುದು ಕಷ್ಟಸಾಧ್ಯವಾದು ದರಿಂದ ಕಾಲಾನುಕಾಲದಲ್ಲಿ ಸಂಗ್ರಹಗಳೂ ಸಂಕಲನಗಳೂ ಶೇಖರವಾಗಿದ್ದಿರಬೇಕು.

ಮುಂದೆ ಎಲ್ಲರೀತಿಯ ಕಾವ್ಯಗಳಿಂದ ಉತ್ತಮ ವಾದ ಭಾಗಗಳನ್ನು ಆರಿಸಿ ವಿಷಯಾನುಗುಣವಾಗಿ ವಿಭಾಗಿಸಿ ಸಂಗ್ರಹಿಸುವ ಆವಶ್ಯಕತೆ ಕಂಡು ಬಂದಿರ ಬೇಕು. ಇವುಗಳಲ್ಲಿ ಪೂರ್ಣ ಪದ್ಯಗ್ರಂಥಗಳಿಂದ, ಗೀತೆ ಮತ್ತು ಸಂದೇಶ ಕಾವ್ಯಗಳಿಂದ ಸಂಕೀರ್ಣ, ಚಾಟುಪದ್ಯಗಳಿಂದ ಶ್ಲೋಕಗಳು ಸಂಗ್ರಹೀತ ವಾಗಿವೆ. ಸಂದರ್ಭ ಸನ್ನಿವೇಶಗಳಿಂದ ವಿರಹಿತ ವಾಗಿ ಸ್ವಯಂಪೂರ್ಣವಾಗಿ ಭಾವನಾಮಯ ವಾಗಿರುವ ಅನೇಕ ಬಿಡಿಪದ್ಯಗಳು ಸಂಸ್ಕೃತ ಸಾಹಿತ್ಯದಲ್ಲಿ ಅನೇಕವಿವೆ. ಇವುಗಳಿಗೆ ಮುಕ್ತಕ ಗಳೆಂದು ಹೆಸರು: ಈ ಸಂಗ್ರಹಗಳಲ್ಲಿ ಇಂತಹ ಅನೇಕ ಮುಕ್ತಕಗಳಿವೆ. ಸಂಗ್ರಹದಲ್ಲಿ ಆರಿಸಿ ಕೊಂಡಿರುವ ಕೆಲವು ಪದ್ಯಗಳಿಗೆ ಆಕರಗಳನ್ನು ಸಂಚಿಸಿರುವುದೂ ಉಂಟು. ಆಕರ ನಿರ್ದಿಷ್ಟವಲ್ಲದ ಶ್ಲೋಕಗಳೇ ಹೆಚ್ಚು. ಆಕರಗಳ ಸಹಾಯದಿಂದ ಕವಿ ಕಾವ್ಯಗಳ ಪರಿಚಯವನ್ನು ಮಾಡಿಕೊಳ್ಳ ಬಹುದು.

ಸಂಕಲನಗಳಲ್ಲೆಲ್ಲಾ ಪರಮ ಪ್ರಾಚೀನವಾದುದು ಪ್ರಾಕೃತದಲ್ಲಿರುವ ೭೦೦ ಶ್ಲೋಕಗಳನ್ನುಳ್ಳ 'ಗಾಥಾಸಪ್ತಶತೀ'. ಪ್ರೇಮದ ಹಲವು ಮುಖ ಗಳಿಗೆ ಸಂಬಂಧಪಟ್ಟ ಪ್ರಾಚೀನ ಕವಿಗಳ ಪದ್ಯ ಗಳು ಇಲ್ಲಿ ಸಂಕಲಿತವಾಗಿವೆ. ಇವುಗಳಲ್ಲಿ ಪ್ರವರ ಸೇನ, ಮಾಯಿರಾಜ, ಹಾಲ ಮೊದಲಾದವರ ಪದ್ಯಗಳನ್ನು ಗುರುತಿಸಬಹುದು. ಈಚಿನ ಉಪ ಲಬ್ಧ ಗ್ರಂಥಗಳ ಪ್ರಕಾರ ಇದು ಹಾಲ ಕೃತವೆಂದು ಉಕ್ತವಾಗಿದೆ. 'ಸತ್ತಸಈ' ಎಂದು ಪ್ರಸಿದ್ಧ ವಾಗಿರುವ ಈ ಗ್ರಂಥದಕಾಲವು ಕ್ರಿ. ಶ. ೧ ನೆಯ ಶತಮಾನವಿರಬಹುದು. ಇಲ್ಲಿಯ ಪದ್ಯಗಳಲ್ಲಿ ಒಂದು ವಿಧವಾದ ಮಾಧುರ್ಯವೂ ಸೌಂದರ್ಯವೂ ಇವೆ.

ಸಂಸ್ಕೃತ ಕವನಸಂಗ್ರಹಗಳಲ್ಲಿ 'ಕವೀಂದ್ರವಚನ ಸಮುಚ್ಚಯ' ವೇ ಪರಮಪ್ರಾಚೀನವಾದುದು. ಇದರ ಕಾಲ ಸುಮಾರು ಕ್ರಿ. ಶ. ೧೦೦೦ ಇರಬ ಹುದು. ಸಂಗ್ರಹಕಾರನ ಹೆಸರು ತಿಳಿಯದು. ಈ ಗ್ರಂ ಥದ ಕೆಲವು ಪದ್ಯಗಳ ಆಧಾರದ ಮೇಲೆ ಊಹಿಸಿ ಈ ಗ್ರಂಥಕ್ಕೆ ಈ ಹೆಸರು ಕೊಟ್ಟಿದೆ. ಈ ಸಂಗ್ರಹ ದಲ್ಲಿ ೧೪ ಪ್ರಕರಣಗಳಿವೆ. ಮೊದಲನೆಯ ಸುಗತ ವ್ರಜ್ಯ' ಎಂಬ ಪ್ರಕರಣದಲ್ಲಿ ಅಶ್ವಘೋಷ ವಸುಕ, ಅಪರಾಜಿತ, ರಕ್ಷಕ, ಶ್ರೀವರನಂದಿ, ವಸುಕಲ್ಪ, ಬಿಲ್ಹಣ, ಶ್ರೀಪಾಶವರ್ಮ, ಜಿತಾರಿನಂದಿ ಮತ್ತು ತ್ರಿಲೋಚನ ಎಂಬ ಕವಿಗಳ ಪದ್ಯಗಳಿವೆ. ಎರಡನೆ ಯದು ಬೋಧಿಸತ್ತ್ವರಲ್ಲಿ ಒಬ್ಬನಾದ ಅವಲೋಕಿ ತೇಶ್ವರನ ವರ್ಣನೆಗೆ ಮೀಸಲಾದುದು. ಇದರಲ್ಲಿರುವ ಪದ್ಯಗಳು ಪಂಡಿತ ಬುದ್ಧಾಕರಗುಪ್ತ ಮತ್ತು ರತ್ನಕೀರ್ತಿ ಇವರಿಗೆ ಸೇರಿದವು. ಇತರ ಪ್ರಕರಣಗಳಲ್ಲಿಯೂ ಇದರಂತೆಯೇ ಇವರಿಗಿಂತ ಹೆಚ್ಚು ಪ್ರಸಿದ್ಧರಾದ ಬಾಣ, ಭವಭೂತಿ, ಶ್ರೀ ಹರ್ಷ, ವಾಕ್ಪತಿರಾಜ, ಅಮರುಕ, ಇವರ ಪದ್ಯ ಗಳಿವೆ. ಇವರಷ್ಟು ಪ್ರಸಿದ್ಧವಲ್ಲದ ಸುಮಾರು ೮೦ ಕವಿಗಳ ಪದ್ಯಗಳು ಈ ಸಂಗ್ರಹದಲ್ಲಿ ಸೇರಿವೆ. ಇದನ್ನು ಪ್ರಾಯಶಃ ಒಬ್ಬ ಬೌದ್ಧ ಕವಿಯು ಸಂಗ್ರ ಹಿಸಿರಬೇಕು.

೧೧ ನೆಯ ಶತಮಾನದಲ್ಲಿ ನಂದನನೆಂಬ ಕವಿಯು 'ಪ್ರಸನ್ನ ಸಾಹಿತ್ಯರತ್ನಾಕರ' ಎಂಬ ಸಂಗ್ರಹವನ್ನು ಶೇಖರಿಸಿದನು. ಸುಮಾರು ೧೨ ನೆಯ ಶತಮಾನದಲ್ಲಿ ಬಂಗಾಳದ ಲಕ್ಷ್ಮಣಸೇನನ ಆಸ್ಥಾನದಲ್ಲಿದ್ದ ಗೋವರ್ಧನನು 'ಗಾಥಾಸಪ್ತಶತಿ' ಯಿಂದ ಪ್ರೇರಿತನಾಗಿ ಅದೇ ಮಾದರಿಯಲ್ಲಿ 'ಸಪ್ತಶತೀ'ಯೆಂಬ ಮತ್ತೊಂದು ಅಕಾರಾದಿ ಕ್ರಮದ ಸಂಗ್ರಹವನ್ನು ಸಂಗ್ರಹಿಸಿದನು. ಇದೇ ಕಾಲದಲ್ಲಿ ಇದೇ ರಾಜನ ಆಸ್ಥಾನದಲ್ಲಿದ್ದ ಶ್ರೀಧರ ಕವಿಯು (೧೨೦೦) ವಂಗದೇಶಕ್ಕೆ ಸೇರಿದ ಸುಮಾರು ೪೦೭ ಕವಿಗಳಿಂದ ೨೬೬೮ ಶ್ಲೋಕ ಗಳನ್ನು ಸಂಗ್ರಹಿಸಿ 'ಸದುಕ್ತಿ ಕರ್ಣಾಮೃತ'ವೆಂಬ ಸಂಕಲನವನ್ನು ಸಿದ್ಧಪಡಿಸಿದನು. ಈ ಸಂಗ್ರಹ ದಲ್ಲಿ ಮೊದಲು ದೇವತಾಸ್ತೋತ್ರವಾದ ಮೇಲೆ ನಾಯಿಕಾಲಕ್ಷಣ ಮೊದಲಾದ ಶೃಂಗಾರ ಪ್ರಧಾನವಾದ ಪದ್ಯಗಳೂ ಇವೆ. ವಕ್ರೋಕ್ತಿ, ಅನ್ಯೋಕ್ತಿ, ಚಾಟೂಕ್ತಿ, ಅನ್ಯಾಪದೇಶ ವಾಕ್ಯ ಗಳೂ ಇವೆ. ಮನುಷ್ಯ, ಅಶ್ವ, ಗೋ, ಕವಿ, ದುರ್ಜನ, ಸಜ್ಜನ, ಕಾಲ-ಇವುಗಳ ಗುಣಾವಗುಣ ಗಳನ್ನು ಚಿತ್ರಿಸುವ ಪದ್ಯಗಳೂ ಇವೆ. ಇವು ಅಮರ, ಶೃಂಗಾರ, ಚಾಟೂ, ಅಪದೇಶ, ಉದ್ಭಾಣಕ ಎಂಬ ಐದು ಭಾಗಗಳಾಗಿವೆ. ಇವು ಗಳನ್ನು ಪ್ರವಾಹಗಳೆಂದು ಕರೆದಿವೆ. ಈ ಪ್ರವಾಹ ಗಳು ವೀಚಿಯಾಗಿ ಭಾಗವಾಗಿವೆ. ಇದರಲ್ಲಿ ಸುಮಾರು ೫೦೦ ವೀಚಿಗಳೂ ೨೬೬೮ ಪದ್ಯಗಳೂ ಇವೆ. ಇದರಲ್ಲಿ 'ಕವೀಂದ್ರ ವಚನ ಸಮುಚ್ಚಯ ದಲ್ಲಿಲ್ಲದ ಅನೇಕ ಹೊಸ ಪದ್ಯಗಳೂ ಇರುವುವು. ಪ್ರಸಿದ್ಧರಲ್ಲದ ಅನೇಕ ಕವಿಗಳ ಉತ್ತಮ ಪದ್ಯಗಳೂ ಇವೆ.

ಯಾದವವಂಶದ ದೊರೆಯಾದ ಕೃಷ್ಣನ (೧೨೪೭–೬೦) ಮಂತ್ರಿಯಾದ ಜಲ್ಹಣನು ಕ್ರಿ.ಶ. ೧೨೫೭ ರಲ್ಲಿ ೨೪೭ ಕವಿಗಳ ೨೭೯೦ ಪದ್ಯಗಳನ್ನು ಸಂಗ್ರಹಿಸಿ 'ಸೂಕ್ತಿ ಮುಕ್ತಾವಳೀ' ಎಂಬ ಗ್ರಂಥ ವನ್ನು ಸಿದ್ಧಪಡಿಸಿದನು. ತನ್ನ ಸಂಗ್ರಹದ ಶ್ರೇಷ್ಠತೆಯನ್ನು ಗ್ರಂಥಾದಿಯಲ್ಲಿ ಮುಂದಿನ ಶ್ಲೋಕದಲ್ಲಿ ಶ್ರುತಪಡಿಸಿದ್ದಾನೆ.

ಸಾಹಿತ್ಯ ವಿದ್ಯಾಹೃದಯಂ
ಜ್ಞಾತುಮಿಚ್ಛಸಿ ಚೇತ್‌ಸುಖಂ।
ತತ್ಪಶ್ಯ ಜಲ್ಹಣ ಕೃತಾಂ
ಸೂಕ್ತಿಮುಕ್ತಾವಲೀಮಿಮಾಂ ॥

(ಸಾಹಿತ್ಯವಿದ್ಯೆಯ ಹೃದಯವನ್ನು ತಿಳಿಯ ಬೇಕಾದರೆ ಜಲ್ಹಣನು ರಚಿಸಿರುವ ಸೂಕ್ತಿಮುಕ್ತಾ ವಳಿಯನ್ನು ನೋಡು.)

ಜಲ್ಹಣನಿಗೆ ಆರೋಹಕಭಗದತ್ತ ಎಂಬ ಮತ್ತೊಂದು ಹೆಸರಿತ್ತು. ಇವನು ಪರಾಕ್ರಮಿ, ವಿದ್ವಾಂಸ, ಆಶ್ರಿತರಿಗೆ ಕಲ್ಪವೃಕ್ಷದಂತೆ ಇದ್ದನೆಂದು ತಿಳಿದುಬರುತ್ತದೆ. 'ಸೂಕ್ತಿಮುಕ್ತಾವಳಿ'ಯನ್ನು ಅವನ ಆಶ್ರಯದಲ್ಲಿದ್ದ ವೈದ್ಯಭಾನು ಪಂಡಿತ ನೆಂಬುವನು ಜಲ್ಹಣನಿಗಾಗಿ ರಚಿಸಿದನೆಂದು ಗ್ರಂಥಾಂತ್ಯ ಭಾಗದಿಂದ ತಿಳಿದು ಬರುತ್ತದೆ. ಇದರ ಪ್ರತಿಯೊಂದು ಭಾಗಕ್ಕೆ 'ಪದ್ಧತಿ' ಎಂಬ ಹೆಸರಿದೆ. ಗ್ರಂಥದಲ್ಲಿ ಅಂತಹ ೧೩೩ ಪದ್ಧತಿಗಳಿವೆ. ಕವಿಯು ಈ ಪದ್ಧತಿಗಳ ಹೆಸರನ್ನು ಪದ್ಯರೂಪದಲ್ಲಿ ಗ್ರಂಥಾ ರಂಭದಲ್ಲಿಯೇ ಸೂಚಿಸಿದ್ದಾನೆ. ಕವಿಕಾವ್ಯ ಪ್ರಶಂಸಾ ಭಾಗದಲ್ಲಿ ೧೦೬ ಕವಿಗಳ ಮತ್ತು ಕವಿ ಯತ್ರಿಯರ ಹೆಸರುಗಳನ್ನೂ ಅವರ ಕಾವ್ಯಗಳನ್ನೂ ಅವುಗಳ ವೈಶಿಷ್ಟ್ಯವನ್ನೂ ವಿವರಿಸಿದ್ದಾನೆ. ವ್ಯಾಸ, ವಾಲ್ಮೀಕಿ, ಕಾಳಿದಾಸ, ಭಾಸ, ಬಾಣ, ರಾಜ ಶೇಖರ, ಜಯದೇವ ಹೆಸರುಗಳೊಂದಿಗೆ ಶೀಲಾ ಭಟ್ಟಾರಿಕಾ, ವಿಕಟನಿತಂಬಾ, ವಿಜಯಾಂಬಿಕಾ, ಪ್ರಭುದೇವಿ, ವಿಜ್ಜಿಕಾ ಮೊದಲಾದ ಕವಯಿತ್ರಿಯರ ಹೆಸರುಗಳೂ ಇವೆ.

ಕಳಿಂಗರಾಯನ 'ಸೂಕ್ತಿರತ್ನಹಾರ'ವು ೧೪ ನೆಯ ಶತಮಾನಕ್ಕೆ ಸೇರಿದುದು. ಸಾಯಣಾಚಾರ್ಯಕೃತ 'ಸುಭಾಷಿತ ಸುಧಾನಿಧಿ'ಯು ಇದೇ ಕಾಲಕ್ಕೆ ಸೇರಿದುದು. ಈಗ ಉಪಲಬ್ಧವಲ್ಲದ ಪ್ರಖ್ಯಾತರಾದ ಭೋಗನಾಥ ಮೊದಲಾದವರ ಕೃತಿಗಳ ಪದ್ಯಗಳೂ ಇಲ್ಲಿ ಅಡಕವಾಗಿವೆ.

ಇದೇ ಕಾಲದಲ್ಲಿ ದಾಮೋದರನ ಮಗನಾದ ಶಾರ್ಙ್ಗಧರನು ೨೬೪ ಕವಿಗಳಿಂದ ೪೬೮೯ ಪದ್ಯ ಗಳನ್ನು ಶೇಖರಿಸಿ ೧೬೧ ಪ್ರಕರಣಗಳಾಗಿ ವಿಂಗಡಿಸಿದ 'ಶಾರ್ಙ್ಗಧರ ಪದ್ಧತಿ'ಯನ್ನು

ರಚಿಸಿದನು. ಇದರ ರಚನಾಮಾರ್ಗವೇ ಬೇರೆ. ಮೊದಲು ಆಶೀರ್ವಾದ, ನಮಸ್ಕಾರ, ಕವಿವರ್ಣನೆ, ದುರ್ಜನಸಜ್ಜನರು, ಅನ್ಯೋಕ್ತಿ, ಮೃಗಾದಿ ವರ್ಣನೆಗಳಾದ ಮೇಲೆ ಬೇರೆ ಸಂಗ್ರಹಗಳಲ್ಲಿ ದೊರೆಯದ ಧನುರ್ವೇದ, ಗಾಂಧರ್ವ ವಿದ್ಯೆ, ಆಯುರ್ವೇದಗಳಿಗೆ ಸಂಬಂಧಪಟ್ಟ ಉತ್ತಮ ಪದ್ಯಗಳೂ ಇವೆ. ಅಲ್ಲದೆ ಶಕುನ ಜ್ಞಾನ, ಭೂತವಿದ್ಯೆ, ಕೇಶ ರಂಜನ, ಸ್ತ್ರೀಪುರುಷ ಜಾತಿ ಭೇದಗಳೂ–ಇವುಗಳಿಗೆ ಸಂಬಂಧಪಟ್ಟ ಪದ್ಯಗಳೂ ಇವೆ. ಮುಂದೆ ನಾಯಿಕಾನಾಯಕ ವರ್ಣನೆ, ದೂತ ಪ್ರೇಕ್ಷಣ ಮುಂತಾದ ಶೃಂಗಾರ ಪ್ರಧಾನ ಪದ್ಯಗಳೂ, ಒಗಟುಗಳೂ ಉಕ್ತವಾಗಿವೆ. ಕೊನೆಯಲ್ಲಿ ಹಠಯೋಗವೇ ಮೊದಲಾದ ಯೋಗಮಾರ್ಗವನ್ನೂ ಅವುಗಳ ಮಹತ್ವವನ್ನೂ ವಿವರಿಸುವ ಪದ್ಯಗಳೂ ಇವೆ. ಗ್ರಂಥಾಂತ್ಯದಲ್ಲಿ ಗ್ರಂಥ ಪ್ರಶಂಸೆ ಮತ್ತು ಖಡ್ಗಪರೀಕ್ಷಾಭಾಗಗಳೂ ಇವೆ. ಗ್ರಂಥಾರಂಭದಲ್ಲಿಯೇ ಇದೊಂದು ಪುಷ್ಪಮಾಲಿಕೆಯೆಂದೂ ಇದನ್ನು ಸರ್ವರೂ ಕಂಠದಲ್ಲಿ ಧರಿಸಬೇಕೆಂದೂ ಕವಿಯು ಆಶಿಸಿದ್ದಾನೆ.

೧೫ ನೆಯ ಶತಮಾನದಲ್ಲಿ ಸಕಲ ಕೀರ್ತಿಯೆಂಬುವನು 'ಸುಭಾಷಿತಾವಳಿ' ಎಂಬ ಗ್ರಂಥವನ್ನು ಸಿದ್ಧಪಡಿಸಿದ್ದಾನೆ. ಶ್ರೀವರನೂ ವಲ್ಲಭದೇವನೂ ಇದೇ ಶತಮಾನದಲ್ಲಿ ಮತ್ತೆರಡು ಇದೇ ಹೆಸರಿನ ಸಂಗ್ರಹಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ವಲ್ಲಭದೇವನ ಕೃತಿಯು ವಿಸ್ತಾರವಾದುದು. ಈತನು ಕಾಶ್ಮೀರದವನು. ಈ ಸಂಗ್ರಹದಲ್ಲಿ ಉಕ್ತವಾಗಿರುವ ಪದ್ಯಗಳೆಲ್ಲ ಸಾಮಾನ್ಯವಾಗಿ ಉತ್ತರಭಾರತದ ಕವಿಗಳಿಗೆ ಸೇರಿದವು. ಬೊಂಬಾಯಿನ ಎಲ್ಫಿನ್‌ಸ್ಟನ್ ಕಾಲೇಜಿನ ಪ್ರಧಾನ ಸಂಸ್ಕೃತಪ್ರಾಧ್ಯಾಪಕರಾಗಿದ್ದ ಪೀಟರ್ಸನ್ ಎಂಬುವರೂ, ಜಯಪುರ ಸಂಸ್ಥಾನದ ದುರ್ಗಾಪ್ರಸಾದ್‌ರೆಂಬ ಪಂಡಿತರೂ ಇದರ ಮೂಲಪ್ರತಿಗಳನ್ನು ಸಂಗ್ರಹಿಸಿ ಸಂಶೋಧಿಸಿ ಉಪೋದ್ಘಾತದೊಡನೆ ಪ್ರಕಟಿಸಿದ್ದಾರೆ. ಈ ಸಂಗ್ರಹದಲ್ಲಿ ೧೦೧ ಪದ್ಧತಿಗಳಿವೆ. ಮಂಗಳಾಚರಣ ಪದ್ಧತಿಯಿಂದ ಪ್ರಾರಂಭವಾಗಿ ಭಗವತ್ ಸ್ವರೂಪ ವರ್ಣನಾ ಪದ್ಧತಿಯಲ್ಲಿ ಮುಗಿಯುತ್ತದೆ. ಇಲ್ಲಿ ಕವಿ, ಕಾವ್ಯ, ಸಜ್ಜನರೂ, ದುರ್ಜನರೂ, ಸಿಂಹ ಮೊದಲಾದ ಪ್ರಾಣಿಗಳೂ, ಮೇಘ ಮೊದಲಾದ ಅನೇಕ ತರದ ವರ್ಣನೆಗಳೂ, ತಾಯಿ, ಕೇಶವರ್ಧನ ವರ್ಣನೆ, ಷಡೃತುಗಳೂ ಪ್ರಣಯಿಗಳಿಗೆ ಬೇಕಾಗುವ ವರ್ಣನೆ, ಶೀಲಸ್ವಭಾವ, ಸಂಕೀರ್ಣ ವಸ್ತುವರ್ಣನೆ ಮೊದಲಾದುವು ಅಡಕವಾಗಿವೆ. ಇಲ್ಲಿಯ ಒಟ್ಟು ಪದ್ಯಗಳ ಸಂಖ್ಯೆ ೩೫೨೭. ಕವಿಯು ಪ್ರತಿಭಾಶಾಲಿಯೂ, ರಸಿಕನೂ, ಪಂಡಿತನೂ ಆಗಿರುವುದರಿಂದ ಇಲ್ಲಿಯ ಅನೇಕ ಭಾಗಗಳು ಶ್ರೇಷ್ಠಮಟ್ಟಕ್ಕೆ ಸೇರಿದವಾಗಿವೆ, ಸಂಪಾದಕರಾದ ಪೀಟರ್ಸನರವರು ತಮ್ಮ ಉಪೋದ್ಘಾತದಲ್ಲಿ ಇದರ ಶ್ರೇಷ್ಠತ್ವವನ್ನು ಮುಕ್ತಕಂಠದಿಂದ ಹೊಗಳಿದ್ದಾರೆ. ಇದು ಒಂದು ಉತ್ತಮ ಸುಭಾಷಿತ ಸಂಗ್ರಹವಾಗಿದೆ.

ಪೋಟಿಯಾರ್ಯನ 'ಪ್ರಸಂಗ ರತ್ನಾವಳಿ'ಯು ಈ ಕಾಲದಲ್ಲಿಯೇ ರಚಿತವಾದುದು. ೧೬ನೆಯ ಶತಮಾನದಲ್ಲಿಯೇ ರೂಪಗೋಸ್ವಾಮಿಯು 'ಪದ್ಯಾವಳಿ', ರತ್ನಭಟ್ಟನೆಂಬುವನು 'ಸೂಕ್ತಿವಾರಿಧಿ' ಎಂಬ ಸಂಕಲನಗಳನ್ನು ಸಂಗ್ರಹಿಸಿದ್ದಾರೆ.

೧೭ನೆಯ ಶತಮಾನದಲ್ಲಿ ಹರಿದಾಸರಿಂದ 'ಪ್ರಾಸ್ತಾವಿಕ ರತ್ನಾಕರ' ಹರಕವಿಯಿಂದ 'ಸುಭಾಷಿತ ಹಾರಾವಳಿ' ಸುಂದರ ಕವಿಯಿಂದ 'ಸೂಕ್ತಿಸುಂದರ' ಮತ್ತು 'ಕವಿಚಂದ್ರೋದಯ' ಎಂಬ ಸಂಗ್ರಹಗಳು ರಚಿತವಾದುವು. ಇದೇ ಕಾಲದಲ್ಲಿ ಶಿವಾಜಿಯ ಮಗ ಸಾಂಬಾಜಿಯು 'ಬುಧ ಭೂಷಣ'ವೆಂಬ ಗ್ರಂಥವನ್ನು ಕೂಡಿಸಿದನು. ೧೮ನೆಯ ಶತಮಾನದಲ್ಲಿ ಹರಿಹರ ಉಪಾಧ್ಯಾಯನು 'ಸುಭಾಷಿತಾವಳಿ'ಯನ್ನೂ ವಜ್ರನಾಥನೆಂಬುವನು 'ಪದ್ಯತರಂಗಿಣಿ'ಯನ್ನೂ ಪೂರ್ಣಚಂದ್ರಕವಿಭೂಷಣನು 'ಉದ್ಭಟ ಸಾರಾವಳಿ'ಯನ್ನೂ ಹರಿಭದ್ರಕವಿಯು 'ಪದ್ಯಾಮೃತ-ತರಂಗಿಣಿ'ಯನ್ನೂ ಸಂಕಲಿಸಿದರು. ಕಳೆದ ಶತಮಾನದ ಉತ್ತರಭಾಗದಲ್ಲಿ ಜರ್ಮನ್‌ದೇಶದ ಡಾ॥ ಬೋಟ್‌ಲಿಂಗ್ ಎಂಬುವನು ಸಂಸ್ಕೃತ ಸಾಹಿತ್ಯದ ಪರಮೋತ್ತಮವಾದ ೮೦೦೦ ಶ್ಲೋಕಗಳ ಸಂಗ್ರಹವೊಂದನ್ನು ಜರ್ಮನ್ ಭಾಷೆಯ ಅನುವಾದದೊಂದಿಗೆ "ಇಂಡಿಷ್ ಸ್ಪ್ರೂಷೆ" (Indische Sprushe) ಎಂಬ ಅಂಕಿತದಿಂದ ಪ್ರಕಟಿಸಿದ್ದಾನೆ.

ಈ ಶತಮಾನದ ಆದಿಭಾಗದಲ್ಲಿ ಶಿವದತ್ತ (ಕಾಶಿನಾಥ ?) ಎಂಬುವನು 'ಸುಭಾಷಿತ ರತ್ನ ಭಾಂಡಾಗಾರ'ವೆಂಬ ಒಂದು ಮಹತ್ ಸಂಕಲನವನ್ನು ಸಿದ್ಧಪಡಿಸಿದನು. ವಾಸ್ತವವಾಗಿ ಹೇಳುವುದಾದರೆ ಸುಮಾರು ೪೦ ಕವಿಯತ್ರಿಯರ ಅಸ್ತಿತ್ವವು ತಿಳಿದುಬಂದಿರುವುದು ಈ ಸಂಕಲನದಿಂದಲೇ. ಇದರಲ್ಲಿ ಕೆಲವರು 'ಶಾರ್ಙ್ಗಧರ ಪದ್ಧತಿ'ಯಲ್ಲಿಯೂ ಉಕ್ತರಾಗಿದ್ದಾರೆ.

ಸುಭಾಷಿತ ಮತ್ತು ಕಾಲದೃಷ್ಟಿಯಿಂದ ಇದು ಬಹಳ ಮುಖ್ಯವಾದ ಗ್ರಂಥ. ಇದು ಬೊಂಬಾಯಿಯ ನಿರ್ಣಯಸಾಗರಮುದ್ರಣಾಲಯದಲ್ಲಿ ಮುದ್ರಿತವಾಗಿ ಪ್ರಕಟವಾಗಿದೆ. ಅನೇಕ ಶಾಸ್ತ್ರ, ನಾಟಕ, ಕಾವ್ಯ, ಇತಿಹಾಸ ಮುಂತಾದುವುಗಳಿಂದ ಆರಿಸಿದ ಹತ್ತು ಸಾವಿರ ಶ್ಲೋಕಗಳು ಇದರಲ್ಲಿ ಅಡಕವಾಗಿವೆ. ಇದುವರೆಗೆ ಸುಭಾಷಿತ ಸಂಗ್ರಹಗಳಲ್ಲಿ ಆರಿಸಿದ್ದ ಮತ್ತು ಇತರ ಗ್ರಂಥಗಳಲ್ಲಿ ಕಂಡುಬರುವ ಪದ್ಯಗಳೆಲ್ಲವನ್ನೂ ಕೊಡಲಾಗಿದೆ. ಇಲ್ಲಿಯ ಪದ್ಯಗಳೆಲ್ಲ ಶ್ರೇಷ್ಠವಾದುವೇ ಎಂದು ಹೇಳಲಾಗುವುದಿಲ್ಲ. ಒಳ್ಳೆಯ ಪದ್ಯಗಳು ಅನೇಕವಿವೆ.

ಈ ಸಂಕಲನದಲ್ಲಿ ಮಂಗಳಾಚರಣ ಸಾಮಾನ್ಯ, ರಾಜ, ಚಿತ್ರ, ಅನ್ಯೋಕ್ತಿ, ನವರಸ ಎಂಬ ಆರು ಪ್ರಕರಣಗಳಿವೆ. ದೇವತಾಸ್ತೋತ್ರವಾದ ಮೇಲೆ ಸಾಮಾನ್ಯ ಪ್ರಕರಣದಲ್ಲಿ ಸುಭಾಷಿತ, ವಿದ್ಯೆ, ಕಾವ್ಯ, ಉದಾರಿ, ಯಾಚಕ, ಸಂತೋಷ, ಉದ್ಯಮಗಳನ್ನು ಕುರಿತ ಅನ್ಯೋಕ್ತಿಗಳು ಇವೆ. ಆಮೇಲೆ ಅಕ್ಬರ್, ಅಶೋಕ, ಭೋಜ, ರುದ್ರ, ಹಮ್ಮೀರ ಮೊದಲಾದ ರಾಜರುಗಳನ್ನು ವರ್ಣಿಸುವ ಪದ್ಯಗಳಿವೆ. ಈ ಪ್ರಕರಣದಲ್ಲಿಯೇ ಸಮುದ್ರ, ತರು, ನೀತಿ, ಪರ್ವತ ಮೊದಲಾದವುಗಳ ವರ್ಣನೆಯೂ ಇದೆ. ಚಿತ್ರ ಪ್ರಕರಣದಲ್ಲಿ ಒಗಟುಗಳು, ಕರ್ತೃ, ಕರ್ಮ, ಕ್ರಿಯೆ, ಗುಪ್ತಕಾರ್ಯ, ಚಿತ್ರ ಪದ್ಯಗಳೂ ಇವೆ. ಐದನೆಯದು ಅನ್ಯೋಕ್ತಿ ಪ್ರಕರಣ, ಕೊನೆಯದು ನವರಸ ಪ್ರಕರಣ.

ಇವೆಲ್ಲ ಆದಮೇಲೆ ಗಾಢವಾದ ಸತ್ಯವನ್ನು ವಿಚಿತ್ರ ರೀತಿಯಲ್ಲಿ ಹೇಳಿರುವ ಸ್ವಾರಸ್ಯವಾದ ವಾಕ್ಯಗಳಿವೆ. ಇವುಗಳೆಲ್ಲ ಸಂಸ್ಕೃತ ಗ್ರಂಥಗಳ ಪದ್ಯಗಳೂ ಮತ್ತೆ ಕೆಲವು ರೂಢಿಯಲ್ಲಿ ಜನರ ಬಾಯಲ್ಲಿ ಬರುತ್ತಿದ್ದ ಪ್ರಾಸಂಗಿಕ ವಾಕ್ಯಗಳೂ ಗಾದೆಗಳೂ ಪದ್ಯದ ಭಾಗಗಳು ಅಥವಾ ಗದ್ಯ ಭಾಗಗಳೂ ಆಗಿರುತ್ತವೆ. ಇವುಗಳನ್ನು ಆರಿಸಿ 'ಸುಭಾಷಿತ ರತ್ನ ಮಂಜೂಷ' ಎಂಬ ಹೆಸರಿನಲ್ಲಿ ಕೂಡಿಸಿದೆ. ಇದಕ್ಕೆ 'ವಿಶಿಷ್ಟ ಸುಭಾಷಿತ ಕೋಶ' ಎಂಬ ಹೆಸರೂ ಉಂಟು. ಇದರ ಒಂದೊಂದು ವಾಕ್ಯವೂ ಆಕರ್ಷಕವಾಗಿದೆ. ಅವುಗಳಲ್ಲಿ ಕೆಲವನ್ನು ಮುಂದೆ ನೋಡಬಹುದು. 'ನ ಕಾಮಸದೃಶೋ ರಿಪುಃ' (ಕಾಮಕ್ಕೆ ಸಮನಾದ ಬೇರೊಂದು ಶತ್ರುವಿಲ್ಲ) "ಸ್ತೋತ್ರಂ ಕಸ್ಯ ನ ತುಷ್ಟಯೇ" (ಸ್ತೋತ್ರವು ಯಾರನ್ನು ತೃಪ್ತಿಪಡಿಸುವುದಿಲ್ಲ) "ನ ಶಾಂತೇಃ ಪರಮಂ ಸುಖಮ್" (ಶಾಂತಿಗೆ ಸಮಾನವಾದ ಸುಖವಿಲ್ಲ.) "ಬುದ್ಧೇಃ ಫಲಮನಾಗ್ರಹಂ" (ಕೋಪಿಸಿಕೊಳ್ಳದಿರುವುದೇ ಬುದ್ಧಿಯ ಫಲ) "ಸರ್ವಶೂನ್ಯಾ ದರಿದ್ರತಾ" (ದರಿದ್ರಾವಸ್ಥೆಯಲ್ಲಿ ಎಲ್ಲವೂ ಶೂನ್ಯ) "ಕಷ್ಟಂ ಖಲು ಪರಾಶ್ರಯಂ" (ಇತರರನ್ನು ಆಶ್ರಯಿಸುವುದು ಕಷ್ಟವೇ ಸರಿ) ನಾಸ್ತಿ ತೃಷ್ಣಾ ಸಮೋ ವ್ಯಾಧಿಃ (ಆಸೆಗೆ ಸಮವಾದ ಜಾಡ್ಯವಿಲ್ಲ) ಇತ್ಯಾದಿ.

(36 ನೇ ಪುಟ ನೋಡಿ)

# ವಾದಿರಾಜರ ಕೀರ್ತನೆಗಳಲ್ಲಿ ಮಧುರಭಾವ

ಉ. ಲ. ಹಯವದನ ಆಚಾರ್ಯ

ವಾದಿರಾಜರ ಕೀರ್ತನೆಗಳಲ್ಲಿ ದಾಸ್ಯ, ಆರ್ತ ಭಾವಗಳೇ ಪ್ರಧಾನವಾಗಿದ್ದರೂ ಅವರ ಕಾವ್ಯ ಪ್ರತಿಭೆ ಪ್ರಕಟವಾಗುವುದು ಅವರ ಮಧುರ ಭಾವದ ಕೀರ್ತನೆಗಳಲ್ಲಿ. ಶೃಂಗಾರ ಅಥವಾ ಮಧುರ ಭಾವ ದಾಸಸಾಹಿತ್ಯದಲ್ಲಿ ಭಕ್ತಿಯ ಒಂದು ವಾಹಕವಾಗಿ ಪ್ರಕಟಗೊಳ್ಳುತ್ತದೆ. ಭಕ್ತ ತನ್ನನ್ನು ಸತಿ, ತನ್ನ ದೇವನನ್ನು ಪತಿ ಎಂದು ಆರೋಪಿಸಿಕೊಂಡು, ತನ್ನ ಅಂತರಂಗದ ಭಕ್ತಿಯನ್ನು ತೋಡಿಕೊಳ್ಳುತ್ತಾನೆ. ವಾದಿರಾಜರ ಕೀರ್ತನೆಗಳಲ್ಲಿ ಕೃಷ್ಣ ಗೋಪಿಯರ ಚಿತ್ರಣದ ಮೂಲಕ ಮಧುರ ಭಾವವು ಪ್ರಕಟವಾಗಿದೆ.

ಹೆಚ್ಚಿಗೆ ಪ್ರಸಿದ್ಧಿಗೆ ಬಾರದ, ಆದರೆ ವಾದಿರಾಜರ ಕೀರ್ತನೆಗಳಲ್ಲಿ ಸುಂದರವಾದ ಕೀರ್ತನೆಯೊಂದರಲ್ಲಿ ವಿರಹ ತಪ್ತಳಾದ ಗೋಪಿಯೊಬ್ಬಳು ತನ್ನ ಗೆಳತಿಯೊಡನೆ ಕೃಷ್ಣನೆಲ್ಲಿದ್ದಾನೆಂದು ತೋರಿಸು ಎಂದು ಅಂಗಲಾಚುತ್ತಾಳೆ.

ತೋರೆ ಬೇಗದಿ ತೋಯಜ ನಯನೆ
ಮದವಾರಣ ಗಮನೆ ಮಾರನ ತಾಪವ
ಸೈರಿಸಲಾರೆನು, ನೀರೆ ನಿನಗೆ ಮುತ್ತಿನ
ಹಾರವ ಕೊಡುವೆನು ॥ ಪ॥

ಮಾರನ ತಾಪವ ಸೈರಿಸಲಾರದ ಗೋಪಿಯ ಹೃದಯ ಬೇಗುದಿ, ಆತಂಕ, ಕೃಷ್ಣನನ್ನು ನೋಡಬೇಕೆಂಬ ತವಕ ಈ ಸಾಲುಗಳಲ್ಲಿ ಮೂಡಿಬಂದಿವೆ. ತನ್ನ ಇನಿಯನನ್ನು ತೋರಿಸಿಕೊಟ್ಟರೆ ಮುತ್ತಿನ ಹಾರವನ್ನು ಬಹುಮಾನವಾಗಿ ಕೊಡುತ್ತೇನೆಂದು ತನ್ನ ಗೆಳತಿಗೆ ವಾಗ್ದಾನವೀಯುತ್ತಾಳೆ. ಆದರೆ ಆಕೆಗೆ ಕೃಷ್ಣನ ಪರಿಚಯ ಬೇಡವೇ? ಅದಕ್ಕಾಗಿ ಮುಂದಿನ ಮೂರು ಚರಣಗಳಲ್ಲಿ ಗೋಪಿ ದಶಾವತಾರದ ಮೂಲಕ ಕೃಷ್ಣನನ್ನು ಪರಿಚಯಿಸುತ್ತಾಳೆ. ಮೂರು ಚರಣಗಳುಳ್ಳ ಈ ಕೀರ್ತನೆಯಲ್ಲಿ ಪ್ರತಿಯೊಂದು ಚರಣದಲ್ಲೂ ದಶಾವತಾರದ ವರ್ಣನೆ ಇದೆ. ವಿಷ್ಣುವಿನ ದಶಾವತಾರ ವಾದಿರಾಜರಿಗೆ ಪ್ರಿಯವಾದ ಕಾವ್ಯ ವಸ್ತು. ದಶಾವತಾರದ ಮೂಲಕ ಅವರು ವಿಷ್ಣು ಸರ್ವೋತ್ತಮತ್ವವನ್ನು ಸಮರ್ಥಿಸುತ್ತಾರೆ. ಈ ಕೀರ್ತನೆಯ ಪ್ರಥಮ ಚರಣ ಹೀಗಿದೆ.

ನೀರೊಳು ಮುಳುಮುಳುಗಾಡುತ ಬಂದು
ಮಥಿಸಿದ ಪಯಸಿಂಧು
ದಾರುಣಿ ಚಿಮ್ಮಿ ಮೇಲಕೆ ತಂದು
ದನುಜನ ಕೊಂದು
ಮೂರು ಪಾದ ಭೂಮಿ ಬೇಡುತ ನಿಂದು
ಮುನಿಕುಲದಿ ಬಂದು
ನಾರಿಯ ಬಿಡದೆ ಪರನಾರಿಯರೊಳು ಕೂತು
ತೋರಮಣಿಯ ಹಯವೇರಿ ನಲಿದನ

ಮಿತ ಶಬ್ದಗಳಲ್ಲಿ ದಶಾವತಾರದ ಚಿತ್ರವನ್ನು ವಾದಿರಾಜರು ಸೆರೆಹಿಡಿದಿದ್ದಾರೆ. ಅವತಾರದ ಹೆಸರನ್ನು ಹೇಳದೆ ಅವತಾರದ ಹಿನ್ನೆಲೆ ಹಾಗೂ ಸಾಧನೆಗಳನ್ನು ಮಾತ್ರ ಇಲ್ಲಿ ವಿವರಿಸಲಾಗಿದೆ. ಈ ಚರಣದ ಕೊನೆಯ ಸಾಲಿನಲ್ಲಿ ಬರುವ "ತೋರಮಣಿಯ" ಎನ್ನುವಲ್ಲಿ ವಾದಿರಾಜರು ಆಡುಮಾತಿನ "ಮಣಿ" ಎನ್ನುವ ಶಬ್ದವನ್ನು ಉಪಯೋಗಿಸಿ ಕೊಂಡು ಅಶ್ಲೀಲತೆಯ ಸೋಂಕೂ ತಗುಲದಂತೆ ಬುದ್ಧಾವತಾರದ ವರ್ಣನೆ ಮಾಡುತ್ತಾರೆ. ಎರಡು, ಮೂರನೆಯ ಚರಣಗಳಲ್ಲೂ ಪುನರುಕ್ತಿ ದೋಷ ತಗುಲದ ರೀತಿಯಲ್ಲಿ ವಾದಿರಾಜರು ಕೃಷ್ಣನ ಶ್ರೇಷ್ಠತೆಯನ್ನು ದಶಾವತಾರದ ಮೂಲಕ ವರ್ಣಿಸುತ್ತಾರೆ. ಕೊನೆಯ ಎರಡು ಚರಣಗಳಲ್ಲಿ ಕೆಲವು ಶಬ್ದ ಚಿತ್ರಗಳು ನಮ್ಮ ಗಮನ ಸೆಳೆಯುತ್ತವೆ. ವರಾಹ ಅವತಾರವನ್ನು ವರ್ಣಿಸುತ್ತಾ "ಮುಗುಳು ಮೇದಿನಿಗಭಯವ ಕೊಟ್ಟು" ಎನ್ನುತ್ತಾರೆ. ಹಿರಣ್ಯಾಕ್ಷ ಭೂಮಿಯನ್ನು ಚಾಪೆಯಂತೆ ಮಡಚಿದಾಗ ಭಯ ವಿಹ್ವಲೆಯಾದ ಭೂದೇವಿ ಮುಗುಳಿನಂತೆ ಮುದುಡಿಕೊಂಡಿದ್ದಳು ಎನ್ನುವ ಚಿತ್ರವನ್ನು ವಾದಿರಾಜರು "ಮುಗುಳು ಮೇದಿನಿ" ಎನ್ನುವ ಶಬ್ದ ಚಿತ್ರದ ಮೂಲಕ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಹತ್ತು ಶಿರನ ಕತ್ತರಿಸಿ ಗೋಕುಲದಲಿ ಎನ್ನುವ ಸಾಲಿನಲ್ಲಿ ರಾಮಕೃಷ್ಣರ ಅವತಾರವನ್ನು ಕೆಲವೇ ಶಬ್ದಗಳಲ್ಲಿ ವಿವರಿಸಿದ್ದಾರೆ.

ಈ ಕೀರ್ತನೆಯಲ್ಲಿ ವಾದಿರಾಜರ ಕೆಲವು ಶಬ್ದ ಸೃಷ್ಟಿಯನ್ನೂ ನೋಡ ಬಹುದಾಗಿದೆ. ನಿಶಾಚರರು ಎನ್ನುವ ಪದಕ್ಕೆ ಸಂವಾದಿಯಾಗಿ 'ಕತ್ತಲೆರು' ಎನ್ನುವ ಪದವನ್ನು ಬಳಸಿದ್ದಾರೆ. ರಾವಣನನ್ನು "ಹತ್ತು ಶಿರನು" ಮತ್ತು "ಮೃಗನು" ಎಂಬ ಪದಗಳ ಮೂಲಕ ಸಂಬೋಧಿಸಿದ್ದಾರೆ. ಈ ಕೀರ್ತನೆಯಲ್ಲಿ ಬರುವ ಅಂತರ್ ಪ್ರಾಸ, ಕೆಲವೇ ಶಬ್ದಗಳಲ್ಲಿ ಅವತಾರಗಳನ್ನು ವರ್ಣಿಸುವ ಜಾಣ್ಮೆ ವಾದಿರಾಜರ ಕಾವ್ಯಶಕ್ತಿಯನ್ನು ಎತ್ತಿ ತೋರಿಸುತ್ತದೆ.

'ತಂದು ತೋರೆ ಶ್ರೀಮುಕುಂದನ ಗೋವಿಂದನ' ಎನ್ನುವ ಕೀರ್ತನೆಯಲ್ಲಿ ಗೋಪಿಯೊಬ್ಬಳು ಕೃಷ್ಣನ ವಿವಿಧ ಅಂಗಗಳ ವರ್ಣನೆ ಮಾಡುತ್ತಾ, ದಂಡ ಪಾಶಧರನೂ, ಕುಂಡಲ ಮಂಡಿತನೂ, ಮೂರು ಲೋಕದ ಗಂಡನೂ, ಉದ್ದಂಡ ಕಠೋರ ಪ್ರಚಂಡನೂ ಆದ ಉಡುಪಿಯ ಗೋವಿಂದನನ್ನು ತಂದು ತೋರು ಎನ್ನುತ್ತಾಳೆ. ಕೃಷ್ಣನ ಆಭರಣದ ವರ್ಣನೆಯನ್ನು ಮಾಡುತ್ತಾ ಹಾರಪದಕ, ಕಂಕಣ, ಕಿರುಗೆಜ್ಜೆ, ಉಡುದಾರ, ವೀರ ಪೆಂಡ್ಯಗಳ ಅಂದುಗೆ ಒಪ್ಪುವ ಕಾಲ್ಗಳ, ಇಂದಿರೆಯಪ್ಪುವ ತೋಳ್ಗಳ, ಶುಭಕುಂದಕುಟ್ಮಲ ಪಲ್ಗಳ ಸುಂದರ ಗೋವಿಂದನನ್ನು ತನಗೆ ತೋರಿಸು ಎಂದು ಗೆಳತಿಯೊಡನೆ ಕೇಳಿಕೊಳ್ಳುತ್ತಾಳೆ. ಈ ಕೀರ್ತನೆಯಲ್ಲಿ ವಾದಿರಾಜರು ಉಡುಪಿಯ ಶ್ರೀಕೃಷ್ಣನ ಸುಂದರ ರೂಪವನ್ನು ಕಣ್ಣ ಮುಂದೆ ನಿಲ್ಲಿಸಿದ್ದಾರೆ. "ಎಂದೆಂದು ಭಕ್ತರ ಪಕ್ಷನ, ನೀರಸ ಜನರ ಬಿಟ್ಟನ" ಎನ್ನುವ ಸಾಲು ಗೋಪಿಗೆ ಭಕ್ತ ಪಕ್ಷಪಾತಿಯಾದ ಕೃಷ್ಣನ ಮೇಲಿರುವ ಅಚಲ ಭಕ್ತಿ ವಿಶ್ವಾಸವನ್ನು ಹೊರಗೆಡಹುತ್ತದೆ. ವಾದಿರಾಜರ ವರ್ಣನಾ ಚಾತುರ್ಯವನ್ನು ಇಲ್ಲಿ ಗಮನಿಸಬಹುದು.

ವಾದಿರಾಜರ ಕೀರ್ತನೆಗಳಲ್ಲಿ ಕೆಲವೊಮ್ಮೆ ಮಧುರ ಭಾವವನ್ನು ಹೊಮ್ಮುವ ಸಂವಾದ ರೂಪದ ಕೀರ್ತನಗಳೂ ದೊರೆಯುತ್ತವೆ. ಇಂತಹ ಕೀರ್ತನೆಗಳು ದಾಸಸಾಹಿತ್ಯದಲ್ಲಿ ಬಹು ವಿರಳ. "ನಾಗಶಯನನು ನಿನಗಾಗಿಯೆ ಬಂದಿಹ" ಎನ್ನುವ ಕೀರ್ತನೆಯಲ್ಲಿ ವಾದಿರಾಜರು ಕೃಷ್ಣ–ಸತ್ಯಭಾಮೆಯರೊಡನೆ ನಡೆಯುವ ಸರಸ ಸಂಭಾಷಣೆಯನ್ನು ಸ್ವಾರಸ್ಯವಾಗಿ ವಿವರಿಸಿದ್ದಾರೆ. ಮನೆಯೊಳಗಿರುವ ಸತ್ಯಭಾಮೆ ರಾತ್ರಿ ಹೊತ್ತಲ್ಲದ ಹೊತ್ತಿನಲ್ಲಿ ಮನೆಯ ಬಳಿಗೆ ಬಂದು ಬಾಗಿಲು ತಟ್ಟುತ್ತಿರುವ ಕೃಷ್ಣನನ್ನು ಸತಾಯಿಸುತ್ತಾ,

ಕೂಗುವ ನೀನ್ಯಾರೋ ಈಗ ಹೊತ್ತಲ್ಲ
ಕೂಗಬೇಡ ಪೋಗೋ ನೀ
ಕೂಗಬೇಡ ಪೋಗೋ

ಎಂದು ಪ್ರತ್ಯುತ್ತರವೀಯುತ್ತಾಳೆ. ಆಗ ಕೃಷ್ಣ ತನ್ನ ಲೀಲಾ ಪರಾಕ್ರಮಗಳನ್ನು ದಶಾವತಾರಗಳ ಮೂಲಕ ವರ್ಣಿಸಿ ಭಾಮೆಯ ಮನಸ್ಸನ್ನು ಗೆಲ್ಲಲು ಪ್ರಯತ್ನಿಸುತ್ತಾನೆ. ಆದರೆ ಅಷ್ಟು ಸುಲಭದಲ್ಲಿ ಸತ್ಯಭಾಮೆ ಅವನ ವಶವಾಗುವುದಿಲ್ಲ. ಆಕೆ ಚುರುಕು ಮಾತಿನಲ್ಲಿ ಪ್ರತಿಯೊಂದು ಅವತಾರವನ್ನೂ ಖಂಡಿಸುತ್ತಾಳೆ.

ನೀರೊಳು ಮುಳುಗಿ ನಿಗಮ ಚೋರನ ಗೆದ್ದ
ನೀರಜಾಕ್ಷನೆ ಭಾಮೆ ನಾ
ನೀರಜಾಕ್ಷನೆ ಭಾಮೆ
ನಾರುವ ಮೈಯನ್ನು ಎನ್ನಲಿ ತೋರದೆ
ಸಾರು ಸಾರು ನೀ ದೂರ ರಂಗ
ಸಾರು ಸಾರು ನೀ ದೂರ

ನೀರಲ್ಲಿ ಮುಳುಗಿ ವೇದವನ್ನು ಕದ್ದ ಸೋಮಕನನ್ನು ಗೆದ್ದವ ತಾನು ಎಂದು ಬೀಗಿ ನುಡಿದ ಕೃಷ್ಣನಿಗೆ ಭಾಮೆ–ನೀರಲ್ಲಿದ್ದು ಜಾರುವ, ನಾರುವ ಮೈಯ ನೀನು ತನ್ನ ಬಳಿಗೆ ಬರಬೇಡ-ಎನ್ನುತ್ತಾಳೆ ಹೀಗೆ ಮುಂದುವರಿಯುತ್ತಾ "ಧರಣಿಗೆ ಸುಖವನು ತೋರಿದ ಸೂಕರ ಪರಮ ಪುರುಷನೆ" ಎನ್ನಲು "ವರಾಹ ರೂಪದ ನಿನ್ನ ಗುರು ಗುರು ಶಬ್ದವ ಅರಿವಳೆಲ್ಲವೋ ನೀ ಪೋಗೈ" ಎನ್ನುತ್ತಾಳೆ. "ಬಾಲನ ತಾಪವ ಕೋಪದಿ ತರಿದ ನಾರಸಿಂಹನೆ ಭಾಮೆ ನಾ'' ಎಂದು ಬಿನ್ನೈಸಿ ನುಡಿದ ಕೃಷ್ಣನಿಗೆ ಸತ್ಯಭಾಮೆ "ಜ್ವಾಲೆಯ ವದನ ಕ್ರೂರ ಕಾರ್ಯಗಳ ಕೇಳಿ ಅಂಜುವಳಲ್ಲ'' ಎಂದು ಪ್ರತ್ಯುತ್ತರವನ್ನಿಯುತ್ತಾಳೆ. ತನ್ನ ವಾಮನ ರೂಪವನ್ನು ತಿಳಿಸಿದಾಗ ಸತ್ಯಭಾಮೆ 'ಕೂಸಿನ ರೂಪದಿ ಮೋಸವ ಮಾಡಿದಗೆ ದಾಸಿಯೊಬ್ಬಳು ಬೇಕೆ ರಂಗ' ಎನ್ನುತ್ತಾಳೆ. ಭಾರ್ಗವ ಅವತಾರವನ್ನು ಕೇಳಿದ ಸತ್ಯಭಾಮೆ 'ಮಾತೆಯನಳಿದ ಘಾತುಕ ನಿನಗೆ ದೂತಿಯೊಬ್ಬಳು ಬೇಕೆ' ಎಂದು ರೇಗಿ ಉತ್ತರಿಸುತ್ತಾಳೆ. ಕೃಷ್ಣಾವತಾರವನ್ನು ವರ್ಣಿಸುತ್ತಾ 'ಹದಿನಾರು ಸಾಸಿರ ಸುದತೇರ ಬದಿಯಲಿಟ್ಟವನೆ ಭಾಮೆ ನಾ' ಎನ್ನಲು ಸತ್ಯಭಾಮೆ ಔಚಿತ್ಯಮೀರಿ ವರ್ತಿಸಿದ ನೀನು ಮುಖ ಮುಚ್ಚಿ ನಡೆ ಎನ್ನುತ್ತಾಳೆ. "ವರತುರುಗವನೇರಿ ಧರೆಯೆಲ್ಲ ಸುತ್ತಿದೆ ದೊರೆವರ ನಾನು'' ಎಂದು ಹೆಮ್ಮೆಯಿಂದ ತನ್ನ ಕಲ್ಕಿ ಅವತಾರವನ್ನು ವರ್ಣಿಸಿದಾಗ–

ತುರಗದ ಚಾಕರಿಯೊಳಗಿರುವವನಿಗೆ
ತರುಣಿಯ ಭೋಗವು ಬೇಕೆ

ಎಂದು ಕಟಕಿಯಾಡುತ್ತಾಳೆ. ಕೊನೆಯ ಚರಣದಲ್ಲಿ

ಸರುವ ಪ್ರಾಣಿಗಳ ಉದರದೊಳಿಟ್ಟ
ಶರಧಿಯೊಳ್ಮಲಗಿದವ ಭಾಮೆನಾ

ಎನ್ನುತ್ತಾ ತಾನು ಸರ್ವರ ರಕ್ಷಕ, ಆಶ್ರಯದಾತ ಎಂದಾಗ ಕರುಣಾಳು ಆರ್ತರ ಆಶ್ರಿತ ಹರಿಯ ಚರಣಕ್ಕೆರಗುತ್ತಾ ಬಾಗಿಲು ತೆರೆಯುತ್ತಾಳೆ. ಕೃಷ್ಣನಿಗೆ ಸಾಧನೆ ಸಿದ್ಧಿಗಳಾಗಲಿ, ಧೈರ್ಯ ಪರಾಕ್ರಮಗಳಾಗಲಿ, ಲೀಲಾ ವಿನೋದಗಳಾಗಲಿ ಸತ್ಯಭಾಮೆಯ ಮನಸ್ಸನ್ನು ಗೆಲ್ಲುವುದಿಲ್ಲ. ಸರ್ವ ಪ್ರಾಣಿಗಳ ರಕ್ಷಕ ತಾನು ಎಂದೊಡನೆ ಆಕೆ ಕೃಷ್ಣನ ಶರಣಾಗುತ್ತಾಳೆ. ನವಿರಾದ ಹಾಸ್ಯ ವಿಡಂಬನೆಯಿಂದ ಕೃಷ್ಣನನ್ನು ಕೆದಕುವ ಸತ್ಯಭಾಮೆಯ ಖಂಡನಾತ್ಮಕ ಉತ್ತರ ಮನೋಜ್ಞವಾಗಿದೆ. ಮಧುರ ಭಾವ ಬೆರೆತಿರುವ ನಿಂದಾಸ್ತುತಿಯ ಕೀರ್ತನೆಯಿದು. ಇಲ್ಲಿ ಭಕ್ತನಿಗೆ ತನ್ನ ಇಷ್ಟ ದೈವದ ಮೇಲಿರುವ ಸದರ, ಸಲುಗೆಯನ್ನು ಕಾಣಬಹುದು. ಹೊರ ತೋರಿಕೆಗೆ ನಿಂದೆಯೆಂದು ಕಂಡು ಬಂದರೂ ಅದರ ಹಿಂದಿರುವ ಭಾವ ಅನನ್ಯ ಹಾಗೂ ಅಮಲ ಭಕ್ತಿ.

ಇದೇ ರೀತಿಯ ಸಂವಾದ ರೂಪದ ಇನ್ನೊಂದು ಕೀರ್ತನೆಯಲ್ಲಿ ಗೋಪಿಯೊಡನೆ ಕಲಹವಾಡಿ ಹೋದ ಕೃಷ್ಣನ ಚಿತ್ರಣ ಹಾಗೂ ಗೋಪಿ ತನಗೂ ಕೃಷ್ಣನಿಗೂ ಆದ ಮಾತಿನ ಚಕಮಕಿಯನ್ನು ತನ್ನ ಗೆಳತಿಗೆ ವಿವರಿಸುವ ವರ್ಣನೆ ಇವೆ,

ಪೋ ಪೋಗೆಲೋ ಸಾ ಸಾರೆಲೋ
ನಗೆಗಿಂತೆನಲು ಮುನಿದು ಪೋದನೆ
ಮನುಮಥನಯ್ಯ ಕಾಣೆ

ತಮಾಷೆಗಾಗಿ ಹೋಗು ಇಲ್ಲಿಂದ ಎನ್ನಲು ಸಿಟ್ಟುಗೊಂಡ 'ಮನುಮಥನಯ್ಯ' ಹೋದ ನೋಡು ಎನ್ನುತ್ತಾಳೆ ಗೋಪಿ, ತನ್ನ ಗೆಳತಿಯೊಡನೆ. ಇಲ್ಲಿ ಕೊನೆಯ ಸಾಲಿನಲ್ಲಿರುವ 'ಮುನಿದು ಪೋದನೆ ಮನುಮಥನಯ್ಯ ಕಾಣೆ' ಎನ್ನುವಲ್ಲಿ ಸೌಂದರ್ಯ ಖನಿಯಾದ ಕೃಷ್ಣನೊಡನೆ ವೃಥಾ ಜಗಳವಾಡಿಬಿಟ್ಟೆನಲ್ಲ ಎನ್ನುವ ಪಶ್ಚಾತ್ತಾಪದ ದನಿ ಇದೆ. ಗೋಪಿ ಕೃಷ್ಣನಿಗೂ ತನಗೂ ಆದ ಮಾತಿನ ಸಂವಾದವನ್ನು ವಿವರಿಸುತ್ತಾಳೆ. ಕೃಷ್ಣ ಆಕೆಯ ಬಳಿಗೆ ಬಂದು.

ಎನ್ನ ಪೆಸರು ಮಾಧವನೆಂಬರು
ಅನ್ಯರನೊಲ್ಲದೆ ನಿನ್ನೊಳು ಮನವಿಟ್ಟೆ

ನಾನು ಮಾಧವ–ಲಕ್ಷ್ಮೀರಮಣ ಆದರೂ ನಿನ್ನಲ್ಲಿ ಅನುರಕ್ತಿಗೊಂಡಿದ್ದೇನೆ ಎನ್ನಲು ಗೋಪಿ 'ಮಾಧವ' ಎನ್ನುವ ಪದದ ದ್ವಂದ್ವಾರ್ಥವನ್ನು ಬಳಸಿಕೊಂಡು

ವನವ ತಿರುಗುವ ವಸಂತನಾದರೆ
ಮನೆಗ್ಯಾತಕೆ ಬಂದೆ

ಎನ್ನುತ್ತಾಳೆ. 'ಮಾಧವ' ಪದಕ್ಕೆ ವಸಂತಮಾಸ ಎನ್ನುವ ಅರ್ಥವೂ ಇದೆ. ಗೋಪಿ ಈ ಅರ್ಥವನ್ನು



ಉಡುಪಿಯಲ್ಲಿ ನಡೆದ ವಾದಿರಾಜ ಕನಕದಾಸ ಆರಾಧನೆಯ ಎರಡು ಚಿತ್ರಗಳು. ಮೇಲಿನ ಚಿತ್ರದಲ್ಲಿ ಜಗದ್ಗುರು ಶ್ರೀ ತೋಂಟದಾರ್ಯ ಮಹಾಸ್ವಾಮಿಗಳು, ಕೆಳಗಣ ಚಿತ್ರದಲ್ಲಿ ಈ ಉಪನ್ಯಾಸ ನೀಡುತ್ತ ಶ್ರೀ ಉ. ಲ. ಹಯವದನಾಚಾರ್ಯ.

ಉಪಯೋಗಿಸಿಕೊಂಡು ವಸಂತನಿಗೆ ವನದಲ್ಲಿ ಕೆಲಸವೇ ಹೊರತು ಮನೆಯಲ್ಲಲ್ಲ ಎನ್ನುತ್ತಾಳೆ. ಈ ಮಾತಿನಿಂದ ರೇಗಿದ ಕೃಷ್ಣ

ವಕ್ರ ನುಡಿಗಳ ನುಡಿಯದಿರೆನ್ನನು
ಚಕ್ರಧರನೆಂಬರು ಎನ್ನನು

ನಾನು ಚಕ್ರಧಾರಿಯಾದ ವಿಷ್ಣು ಎನ್ನುವ ಹೆಗ್ಗಳಿಕೆ ಕೃಷ್ಣನದು. ಆದರೆ ಗೋಪಿ 'ಚಕ್ರ' ಶಬ್ದವನ್ನು ಕುಂಬಾರನಚಕ್ರ ಎನ್ನುವ ಅರ್ಥದಲ್ಲಿ ಬಳಸಿಕೊಂಡು,

ಲೋಕಕ್ಕೆ ಮಡಕೆಯ ಮಾಡುವ ಕುಂಬಾರ
ಒಕ್ಕಲ ಮನೆಗೆ ಪೋಗೋ

ಎನ್ನುತ್ತಾಳೆ. ಕುಂಬಾರನಾದ ನೀನು ಮಡಕೆ ಮಾಡುತ್ತಾ ಬೇಸಾಯಗಾರನ ಮನೆಗೆ ಹೋಗು ನನ್ನ ಮನೆಗೆ ಬರಬೇಡ ಎನ್ನುತ್ತಾಳೆ. ಮುನಿಸಿನಿಂದ ಕೃಷ್ಣ ನೀನು ಮನ ಬಂದಂತೆ ಮಾತನಾಡಬೇಡ "ಹಿರಿಯರು ಹರಿಯೆಂಬರು ಎನ್ನನು" ಎನ್ನಲು ಗೋಪಿ ಚುರುಕು ಮಾತಿನಿಂದ ಉತ್ತರ ನೀಯುತ್ತಾಳೆ.

ತರುಗಳೇರಿ ಕುಣಿದಾಡುವ ಕಪಿಗಳ
ಕೆರದೊಳಾಡು ಪೋಗು

'ಹರಿ' ಎನ್ನುವ ಪದಕ್ಕೆ ಕಪಿ ಎನ್ನುವ ಅರ್ಥವೂ ಇದೆ. ಆದ್ದರಿಂದ ಗೋಪಿ ಕೃಷ್ಣನೊಡನೆ ಮರ್ಕಟ ನೀನಾದರೆ ಮರದ ಮೇಲಾಡು ಮನಗೆ ಬರಬೇಡ ಎನ್ನುತ್ತಾಳೆ. ತನ್ನನ್ನು ಹೆಚ್ಚು ಹೆಚ್ಚಾಗಿ ಚುಚ್ಚಿದಷ್ಟು ಕೃಷ್ಣ ಹೆಚ್ಚು ಹೆಚ್ಚಾಗಿ ತನ್ನ ಹಿರಿಮೆ ಗರಿಮೆಗಳನ್ನು ವಿವರಿಸುತ್ತಾನೆ.

ಎನ್ನ ಮಹಂತರನಂತನೆಂದೆಂಬರು
ಮನ ಬಂದಂತೆ ನೀ ಮಾತನಾಡದಿರು

ತಿಳಿದವರು ನನ್ನನ್ನು ಆದಿ ಅಂತ್ಯವಿಲ್ಲದ 'ಅನಂತ'ನೆನ್ನುತ್ತಾರೆ. ಮನಬಂದಂತೆ ನೀನು ಮಾತನಾಡಬೇಡ ಎನ್ನಲು ಗೋಪಿ ಕೃಷ್ಣನ ಮಾತನ್ನೇ ತಿರುಗುಬಾಣವಾಗಿ ಉಪಯೋಗಿಸುತ್ತಾಳೆ.

ಪನ್ನಂಗನಾದರೆ ಪಾತಾಳಕ್ಕೆ ಪೋಗು
ನಿನ್ನ ಸಂಗಕ್ಕೆ ಅಂಜುವೆ

ಅನಂತ–ಅಂದರೆ ಆದಿಶೇಷನು ನೀನಾದರೆ ಪಾತಾಳಕ್ಕೆ ಹೋಗು. ಅದೇ ನಿನ್ನ ಸ್ಥಳ. ನಿನ್ನ ಸಂಗದಲ್ಲಿರಲಿಕ್ಕೂ ನಾನು ಅಂಜುತ್ತೇನೆ. ಎನ್ನುತ್ತಾಳೆ. ಹದಿಮೂರು ಚರಣಗಳುಳ್ಳ ಈ ಕೀರ್ತನೆಯಲ್ಲಿ ಕೃಷ್ಣ ಗೋಪಿಯರ ದ್ವಂದ್ವಾರ್ಥದ ಸಂಭಾಷಣೆ ಹೀಗೆ ಸ್ವಾರಸ್ಯವಾಗಿ ಮುಂದುವರಿಯುತ್ತದೆ. ಕೊನೆಯ ಚರಣದಲ್ಲಿ ಉರದಲ್ಲಿ ಲಕ್ಷ್ಮಿಗೆ ಸ್ಥಾನವಿತ್ತ, ನಾಭಿ ಕಮಲದಿಂದ ಸೃಷ್ಟಿಕರ್ತ ಬ್ರಹ್ಮನಿಗೆ ಜನ್ಮವಿತ್ತ ತನ್ನ ಮಹತ್ತು ಬ್ರಹ್ಮವನ್ನು ತಿಳಿದವರು ಮಾತ್ರ ತಿಳಿಯಬಲ್ಲರು, ಒಲಿದು ನಿನ್ನ ಮನೆಗೆ ಬಂದರೆ ಕಲಹ ಮಾಡಬೇಡ ಎನ್ನುವ ಕಿವಿ ಮಾತನ್ನೂ ತಿಳಿಸುತ್ತಾನೆ. ಈ ಕೀರ್ತನೆಯಲ್ಲಿ ಕೊಂಕು ನುಡಿಗಳಿಂದ ಕೃಷ್ಣನ ಬಿಂಕವನ್ನು ಕೆಣಕುವ ಗೋಪಿಯ ಚಾತುರ್ಯ ಮೆಚ್ಚುವಂತಹುದು. ವಾದಿರಾಜರ ಹಾಸ್ಯ ಪ್ರಜ್ಞೆ, ಶ್ಲೇಷೆಯನ್ನು ಸಮರ್ಥವಾಗಿ ಬಳಸಿಕೊಳ್ಳುವ ಅವರ ಜಾಣ್ಮೆ, ಆಡುಮಾತಿನ ಸೊಗಡು ಅಸ್ವಾದ್ಯಕರವಾದುದು.

" ಆರ ಮಗನೆಂದರಿಯದೆ " ಕೀರ್ತನೆಯಲ್ಲಿ ಗೊಲ್ಲರ ಕೇರಿಯಲ್ಲಿ ಸುಳಿಯುತ್ತಿದ್ದ ನೀಲ ವರ್ಣದ ಮೈಯ, ತುಲಸಿವನಮಾಲೆ ಧರಿಸಿದ ಚೆನ್ನಿಗ ಕೃಷ್ಣನನ್ನು ಗೋಪಿಯೊಬ್ಬಳು ಸುಂದರವಾಗಿ ವರ್ಣಿಸುತ್ತಾಳೆ.

ಚಿಕ್ಕ ಪ್ರಾಯದ ಚೆನ್ನಿಗ
ಉಕ್ಕುವ ಕಡು ಚೆಲುವನೆ
ಚೊಕ್ಕಟಾದ ಚದುರನೊಬ್ಬ ಕುಚಕ್ಕೆ ಕೈ
ಯಿಕ್ಕಿ ಕಸ್ತೂರಿ ಪೂಸಿದ

ಈ ಚರಣವು ಕೃಷ್ಣನ ದೇಹ ಸೌಂದರ್ಯವನ್ನು ವರ್ಣಿಸುವುದರೊಂದಿಗೆ ಗೋಪಿಗೆ ಅದನ್ನು ಕಂಡು ಉಂಟಾದ ಸಂತೋಷವನ್ನೂ ಸೂಚಿಸುತ್ತದೆ. ಮುಂದಿನ ಎರಡು ಚರಣಗಳಲ್ಲಿ ಕೃಷ್ಣನ ಶೃಂಗಾರ ಲೀಲೆಗಳ ವರ್ಣನೆಯಿದೆ.

ಪೀತಾಂಬರವನುಡಿಸಿದ ವಿನಯ ಸವಿ
ಮಾತು ಮಾತಿಗೆ ನಗಿಸಿದ
ಪ್ರೀತಿಯಿಂದಲೆ ತನ್ನ ಚೆಂದುಟಿಯ ಅಧರಾ
ಮೃತವನುಣಿಸಿದ
ಪಾರಿಜಾತವ ಸೂಡಿದ ಕಸ್ತೂರಿ
ಗೀರು ನಾಮವ ತಿದ್ದಿದ
ದೂರದಲಿ ನಿಂತು ಎನ್ನ ಸೋಗೆಗಣ್ಣ
ಓರೆ ನೋಟದಿ ನೋಡಿದ

"ಪೀತಾಂಬರವನುಡಿಸಿದ", "ಪಾರಿಜಾತವ ಸೂಡಿದ", "ಕಸ್ತೂರಿ ಗೀರು ನಾಮವ ತಿದ್ದಿದ" ಗೋಪಿಯ ಸೋಗೆಗಣ್ಣನ್ನು "ಓರೆ ನೋಟದಿಂದ ನೋಡಿದ" ಕೃಷ್ಣನ ಸುಂದರ ಚಿತ್ತ ಚಲಿಸುವ ಚಿತ್ರ ಮಾಲೆಯಂತೆ ಕಣ್ಣ ಮುಂದೆ ಹಾದು ಹೋಗುತ್ತದೆ. ಭಾವಗೀತೆಯ ಸೌಂದರ್ಯದಿಂದ ಕೂಡಿದ ಈ ಕೀರ್ತನೆ ಒಂದು ದೃಶ್ಯರೂಪಕದಂತಿದೆ. ಮಧುರ ಪದಪುಂಜಗಳಿಂದ ಸ್ಫುರಿಸುವ ಮಧುರ ಭಾವ ಇಲ್ಲಿ ಮಡುಗಟ್ಟಿದೆ. ವಾದಿರಾಜರ ಸೌಂದರ್ಯ ದೃಷ್ಟಿ, ಶಬ್ದಗಳನ್ನು ಲೀಲಾಜಾಲವಾಗಿ ಅವರು ಬಳಸುವ ರೀತಿ, ಅವರ ಕಾವ್ಯ ಶಕ್ತಿ ಈ ಚಿಕ್ಕ ಕೀರ್ತನೆಯಲ್ಲಿ ಎದ್ದು ಕಾಣುತ್ತದೆ. "ಯಾರ ಮಗನೆಂದರಿಯದೆ" ಎನ್ನುವ ಸಾಲಿನಲ್ಲಿ ಕೃಷ್ಣ ಯಾರ ಮಗನೂ ಅಲ್ಲ. ಆತ 'ಸ್ವಯಂಭೂ' ಎನ್ನುವ ಆಧ್ಯಾತ್ಮಿಕ ಅರ್ಥವನ್ನು ವಾದಿರಾಜರು ಧ್ವನಿಸಿದ್ದಾರೆ

"ರಂಗನೇಕೆ ಬಾರ ತಂಗಿ" ಕೀರ್ತನೆಯಲ್ಲಿ ವಾದಿರಾಜರು ಸುತ್ತಲಿನ ಪ್ರಕೃತಿ ಸೌಂದರ್ಯ, ವಿರಹ ವೇದನೆಯಿಂದ ಕಂಗೆಟ್ಟ ಗೋಪಿಯ ಬಯಕೆಯನ್ನು ಹೇಗೆ ಉದ್ದೀಪನಗೊಳಿಸುತ್ತದೆ ಎಂಬುದನ್ನು ಚಿತ್ರಿಸಿದ್ದಾರೆ.

ರಂಗನೇಕೆ ಬಾರ ತಂಗಿ
ಮಂಗಳ ಮಹಿಮನ ದಿವ್ಯಾಂಗ ಕಾಣದೆ ಎನ್ನ
ಕಂಗಳು ಕಂಗೆಡುತಿವೆ

ಎನ್ನುತ್ತಾ ಗೋಪಿ,

ತಿಂಗಳು ಮೂಡಿತು ಪಿಕ ಸಂಗೀತವ ತೊಡಗಿತು
ಭೃಂಗ ತನ್ನಂಗನೆಯರ ಸಂಗಡ ನಲಿದು ಬಂದ
ಶೃಂಗಾರ ವನದ ತಂಗಾಳಿ ಬೀಸಿತು ನೋಡಾ

ಬೆಳದಿಂಗಳು, ಕೋಗಿಲೆಯ ಇಂಚರ, ಶೃಂಗಾರ ವನದಲ್ಲಿ ತುಂಬಿ ಜೋಡಿಗಳ ಸಂಚಾರ, ತಂಗಾಳಿ – ಮನ್ಮಥನು ಬಿಟ್ಟ ಬಾಣದಂತೆ ಗೋಪಿಯ ಅಂತರಂಗವನ್ನು ಕಲಕುತ್ತವೆ. 'ಪೆಂಗಳಿಗೆ' ಬಂದ ಈ ಕಷ್ಟವನ್ನರಿತು ದೇವೋತ್ತುಂಗನಾದ ಕೃಷ್ಣ ಕಾಯದಿದ್ದರೆ ಬದುಕುವ ಆಸೆಯೇ ಇಲ್ಲ ಎನ್ನುತ್ತಾಳೆ ಗೋಪಿ. ಈ ಕೀರ್ತನೆಯಲ್ಲಿ ಬರುವ ನಿಸರ್ಗ ವರ್ಣನೆ ಕೇವಲ ಅಲಂಕಾರಿಕವಾಗಿರದೆ ಕಾವ್ಯದ ವಸ್ತುವಿಗೆ ಪೂರಕ ಹಾಗೂ ಪೋಷಕವಾಗಿ ಚಿತ್ರವಾಗಿದೆ.

ಕೃಷ್ಣನನ್ನು ಕರೆತಲು ಗೋಪಿ ತನ್ನ ಗಿಳಿಯೊಂದನ್ನು ದೂತನಾಗಿ ಕಳುಹಿಸುವ ವರ್ಣನೆ ವಾದಿರಾಜರ ಕೀರ್ತನೆಯೊಂದರಲ್ಲಿದೆ.

ಗಿಣಿಯೆ ನಿನಗೇನು ಬೇಕದನೀವೆ.
..............................
ನಂದಗೋಪಿಯ ಮುದ್ದು ಕಂದನೆನಿಪ
ಮುಕುಂದನ
ನಿಂದಿರುಳು ತಂದು ತೋರು ಗಿಣಿಯೆ

ನಿನಗೆ ಬೇಕಾದ್ದನ್ನು ಕೊಡುತ್ತೇನೆ. ನಂದಗೋಪಿಯ ಮುದ್ದು ಕಂದನನ್ನು ಈ ರಾತ್ರಿಯೆ ತಂದು ತೋರಿಸು ಎನ್ನುತ್ತಾಳೆ ಗೋಪಿ. ಆ ಗಿಳಿಯ ವರ್ಣನೆಯಂತೂ ತುಂಬ ಸೊಗಸಾಗಿದೆ.

ಮೂರು ಬಣ್ಣದ ಕೊರಳ ಸಿರಿಯುಳ್ಳ ಗಿಣಿ
ನೀನು
ಮೂರು ಬಣ್ಣದ ಚಾರು ನಯನ

ಗಿಳಿಯನ್ನೇ ತನ್ನ ದೌತ್ಯಕ್ಕಾಗಿ ಆರಿಸಲು ಕಾರಣ ಗಿಳಿಗೂ ಕೃಷ್ಣನಿಗೂ ಇರುವ ಸಾಮ್ಯ ಸಂಬಂಧ ಹಾಗೂ ಹೋಲಿಕೆಗಳು. "ಮಾರನನುಚರಗಿಳಿ

ಮಾರ ಜನಕನು ಹರಿ, ಹರಿಯ ವಾಹನವಾದ ಗರುಡನ ಕುಲದಲ್ಲಿ ಉದ್ಭವಿಸಿದ ಗಿಳಿ, ಹರಿಯ ಸುತನೆನಿಪ ಕಾಮನಿಗೆ ರಥವಾಗಿಯೂ ಮೆರೆಯುತ್ತಿದ್ದಾನೆ. ದೈಹಿಕ ಸೌಂದರ್ಯದಲ್ಲೂ ಹರಿಗೂ ಗಿಳಿಗೂ ಹೋಲಿಕೆಗಳಿವೆ. ಪಚ್ಚೆಯ ಬಣ್ಣದ ಗರಿಯ ಸಿರಿಯುಳ್ಳವ ಗಿಳಿ. ಪಚ್ಚೆಯ ಬಣ್ಣದ ವ್ಯಾಸನು ಹರಿ. ಚೆಂದದ ಹರಿಯ ಚೆಂದುಟಿಯಂತೆ ಗಿಳಿಯ ಚೆಲುವ ಮುಖ ಕೆಂಪು, ಈ ಸಾಮ್ಯ ಸಂಬಂಧಗಳಿರುವುದರಿಂದ ಗಿಳಿಯ ಮಾತನ್ನು ಕೃಷ್ಣ ಮೀರನು, ಅದರ ಬಿನ್ನಹವನ್ನು ಮನ್ನಿಸಿ ಆತ ಖಂಡಿತ ತನ್ನ ಬಳಿಗೆ ಬರುವ ಎನ್ನುವ ಆತ್ಮವಿಶ್ವಾಸ ಗೋಪಿಯದು.

ಮಧುರ ಭಾವದ ಹೆಚ್ಚಿನ ಕೀರ್ತನೆಗಳು ಕೃಷ್ಣನ ಅಗಲುವಿಕೆಯಿಂದುಂಟಾದ ಗೋಪಿಯ ವಿರಹ ತಾಪವನ್ನು ಚಿತ್ರಿಸಿದರೆ "ಇಷ್ಟು ದಯವುಳ್ಳವನ ಯಾಕೆ ಬರಬೇಡೆಂದಿ'' ಎನ್ನುವ ಕೀರ್ತನೆಯಲ್ಲಿ ಮುನಿಸಿನಿಂದ ಕೃಷ್ಣನನ್ನು ಬಳಿಗೆ ಬರಬೇಡವೆಂದು ಹೇಳಿದ ಗೋಪಿಯ ಕೋಪಕ್ಕೆ ಆತ ಕಾರಣವನ್ನು ಕೇಳುತ್ತಾನೆ.

ಇಷ್ಟು ದಯವುಳ್ಳವನ ಯಾಕೆ ಬರಬೇಡೆಂದಿ
ಇಷ್ಟು ನಿರ್ದಯಳೆ ನೀನು

ತನಗೆ ಆಕೆಯ ಮೇಲಿರುವ ದೃಢ ಪ್ರೇಮವನ್ನು ಹಲವಾರು ಉದಾಹರಣೆಗಳ ಮೂಲಕ ಮನದಟ್ಟು ಮಾಡುತ್ತಾನೆ.

ಸಣ್ಣ ಕಮಲದೆಲೆಯ ಬಣ್ಣದ ಗಿಣಿ
ಬರೆದುಸಣ್ಣ ಸೀರೆಯ ಕೊಡುವೆನೆ
ಕಣ್ಣಿಗೆ ಪ್ರಿಯವಾದ ಕಮಲಮಯ
ಕುಪ್ಪಸವ ಕರೆದು ಕೈಯಲಿ ಕೊಡುವೆನೆ
ಬಿನ್ನಣದಿಂದಲಿ ಬಗೆ ಬಗೆಯಲಿ ನಿನಗೆ
ಬಾಯ ಮುದ್ದನು ಕೊಡುವೆನೆ ಸಖಿಯೆ

ನಿನ್ನ ಮೇಲೆ ನಿಜವಾಗಿಯೂ ಪ್ರೇಮ ಪ್ರೀತಿಗಳಿಲ್ಲದ್ದಲ್ಲಿ ಬಗೆ ಬಗೆಯ ಬಣ್ಣದ ಸೀರೆ ಕುಪ್ಪಸಗಳನ್ನು ಬಹುಮಾನವಾಗಿ ಕೊಡುತ್ತಿದ್ದೆನೆ ಎಂದು ಪ್ರಶ್ನಿಸುತ್ತಾನೆ ಕೃಷ್ಣ. ಗೋಪಿಯ ಕೋಪ ಇನ್ನೂ ಇಳಿಯದಿದ್ದುದನ್ನು ಕಂಡು ಕೃಷ್ಣ ''ಕಳಿಯಡಿಕೆ ಕರ್ಪೂರ ಕಾಚಿನ ಗುಳಿಗೆ ಕೈ ತುಂಬ........ ಕರೆದು ಕೊಡುತಿದ್ದೆನೆ, ''ಎಳೆ ಮಾವಿನಂತೆ ತಿಳಿರು ಸುಳಿಗರೆವ ರುಮಾಲೆ.........'' ಯನ್ನು ತಲೆಯಲ್ಲಿ ಸುತ್ತಿಕೊಂಡು ಬರುತಿದ್ದೆನೆ ಎನ್ನುತ್ತಾ ನಿನ್ನಲ್ಲಿ ಪ್ರೇಮ ಸಲುಗೆ ಇಲ್ಲದಿದ್ದಲ್ಲಿ ''......... ನಿನ್ನ ಉರುಟು ಕುಚಗಳ ಪಿಡಿವೆನೆ" ''ಮುದದಿಂದ ನಿನ್ನ ಮುಖ ಕಿರು ಬೆವರನೆ ಒರೆಸಿ ಕಸ್ತೂರಿ ತಿಲಕವ ನಿಡುವೆನೆ" ಎಂದು ಆಕೆಯ ಮನ ಮುಟ್ಟುವಂತೆ ಪ್ರಶ್ನಿಸುತ್ತಾನೆ. ಯಾರೋ ಆಧುನಿಕ ಕವಿಯೊಬ್ಬರು ಬರೆದ ಪ್ರೇಮ ಗೀತೆಯಂತಿದೆ ಈ ಕೀರ್ತನೆ. ಭಾವಗೀತೆಯ ಸೌಂದರ್ಯವನ್ನು ಹೊತ್ತಿರುವ ಈ ಕೃತಿಯಲ್ಲಿ ಮಧುರ ಭಾವ ಸಾಂದ್ರವಾಗಿದೆ. ಈ ಕೀರ್ತನೆಯಲ್ಲೂ ವಾದಿರಾಜರ ಕಲ್ಪನಾ ವಿಲಾಸ, ಸೌಂದರ್ಯ ದೃಷ್ಟಿ ವರ್ಣನಾ ಚಾತುರ್ಯ, ಕಾವ್ಯ ಶಕ್ತಿ ನಮ್ಮ ಗಮನ ಸೆಳೆಯುತ್ತವೆ.

ವಾದಿರಾಜರ ಕೀರ್ತನೆಗಳಲ್ಲಿ ಮಾತ್ರವಲ್ಲ ಅವರ ಖಂಡ ಕಾವ್ಯಗಳಾದ ಲಕ್ಷ್ಮೀ ಶೋಭಾನೆ ಭ್ರಮರಗೀತೆಗಳಲ್ಲೂ ನಾವು ಈ ಮಧುರ ಭಾವದ ವರ್ಣನೆಗಳನ್ನು ಕಾಣಬಹುದು. ಭಾಗವತದ ದಶಮ ಸ್ಕಂದದಲ್ಲಿ ಬರುವ ಹತ್ತು ಶ್ಲೋಕಗಳನ್ನು ಆಧರಿಸಿ ಬರೆದಿರುವ ಭ್ರಮರ ಗೀತೆಯಲ್ಲಿ ಕೃಷ್ಣನು ಗೋಕುಲ ನಿರ್ಗಮಿಸುತ್ತಿರುವ ಸುದ್ದಿಯನ್ನು ಕೇಳಿದ ಗೋಪಿಯರ ಉತ್ಸಾಹ, ಸಂಭ್ರಮ, ಸಡಗರ, ಕೃಷ್ಣನನ್ನು ನೋಡಬೇಕೆಂಬ ಅವರ ತವಕ–ಇವನ್ನು ವಾದಿರಾಜರು ಮನೋಜ್ಞವಾಗಿ ಚಿತ್ರಿಸಿದ್ದಾರೆ. ಸಿರಿಯರಸನನ್ನು ಕಾಣುವ ತವಕದಿಂದ–

ಕೆಲರು ಉಣುತ ಉಡುತಲಿದ್ದರೆ
ಕೆಲರು ತೊಡುತ ಕೆಲರು ಕಟ್ಟುತ ಬಿಡುತಲಿದ್ದರೆ
ಕೆಲರು ಅಡಿಗೆಗಳ ಮರೆತರೆ, ಕೈಗೆ ಕಂಕಣ
ಕೆಲರು ಇಡುತ ಕಾಲಲಿಟ್ಟರೆ

ಕೆಲವರು ಉಣುತ್ತಲೆ, ಬಟ್ಟೆ ಉಡುತಿದ್ದರಂತೆ, ಕೆಲವರು ಬಟ್ಟೆ ತೊಡುತ್ತ ತಲೆ ಕಟ್ಟಿಕೊಳ್ಳುತ್ತಿದ್ದರಂತೆ, ಕೆಲವರು ಅಡಿಗೆ ಮಾಡುವುದನ್ನು ಮರೆತರು. ಅವಸರದಿಂದ ಕೈಯ ಬಳೆಯನ್ನು ಕಾಲಿಗಿಟ್ಟರಂತೆ. ಕೆಲವರು ಕಾಲಿನ ಕಡಗವನ್ನು ಕಿವಿಗಿಟ್ಟರೆ ಕಿವಿಯ ಓಲೆಯನ್ನು ತೆಗೆದು ಬಳೆಗೆ ಸಿಕ್ಕಿಸಿದರು. ಕೆಲವರು. ಮಕ್ಕಳಿಗೆ ಮೊಲೆಯೂಡಿಸುತ್ತಲೆ ಕೃಷ್ಣನನ್ನು ನೋಡಲು ಕೆಲವರು ಬಂದರಂತೆ. ಗೋಪಿಯೊಬ್ಬಳು ಪಾಯಸಕ್ಕಾಗಿ ಕೂಗುತ್ತಿದ್ದ ಮಗುವೊಂದಕ್ಕೆ ಸಿಟ್ಟಿನಿಂದ ಬಿಸಿ ಪಾಯಸ ಬಡಿಸಿ ಮಗುವಿನ ಬೆಟ್ಟು ಸುಟ್ಟಳಂತೆ. ಹೀಗೆ ವಾದಿರಾಜರು ಗೋಪಿಯರ ಕಾತರ, ಆತುರ, ಅವಸರವನ್ನು ಬಹುಸ್ವಾರಸ್ಯವಾಗಿ ವಿವರಿಸಿದ್ದಾರೆ.

ಈ ಮಧುರ ಭಾವದ ಕೃತಿಗಳಲ್ಲಿ ವಾದಿರಾಜರ ಕಲ್ಪನಾಶಕ್ತಿ ಗರಿಗೆದರಿ ಹಾರಾಡಿದೆ, ಕಾವ್ಯ ಸ್ರೋತಸ್ಸು ಕೋಡಿಯಾಗಿ ಹರಿದಿದೆ, ವರ್ಣನಾ ವಿಲಾಸ ಹೊಸ ಆಯಾಮವನ್ನು ಪಡೆದಿದೆ.

(ಕಳೆದ ವರ್ಷ ಉಡುಪಿಯಲ್ಲಿ ನಡೆದ ವಾದಿರಾಜ ಕನಕದಾಸ ಆರಾಧನೋತ್ಸವದಲ್ಲಿ ಮಂಡಿಸಿದ ಉಪನ್ಯಾಸ ಸಂಗ್ರಹ.)

# ಪರಾಂಕುಶ ಮುನಿಗಳು

ಶ್ರೀ ಡಿ. ಕೃಷ್ಣಯ್ಯಂಗಾರ್

ಭಕ್ತಿ ಪ್ರಭಾವ ಭವದದ್ಭುತಭಾವ ಬಂಧ
ಸಂಧುಕ್ಷಿತ ಪ್ರಣಯಸಾರ ರಸೌಘ ಪೂರ್ಣಃ
ವೇದಾಂತರತ್ನನಿಧಿಃ ಅಚ್ಯುತ ದಿವ್ಯಧಾಮಾ
ಜೀಯಾತ್ ಪರಾಂಕುಶಪಯೋಧಿ
ರಸೀಮಭೂಮಾ

ದಕ್ಷಿಣ ಭಾರತದ ತಾಮ್ರಪರ್ಣಿ ನದೀತೀರದ ಆಳ್ವಾರ್ ತಿರುನಗರಿ ಕ್ಷೇತ್ರದಲ್ಲಿ ಪರಾಂಕುಶ ಮುನಿಗಳ ಅವತಾರವಾಯಿತು. ತಾಯಿ ಕಾರಿ ತಂದೆ ಮಾರ್ರ್, ಮಗು ಕಾರಿಮಾರಪ್ಪಿರಾ್. ಜನಿಸಿದ ಮಗುವು ಅಳಲಿಲ್ಲ. ಕಣ್ಣು ತೆರೆಯಲಿಲ್ಲ: ಸ್ತನ್ಯಪಾನ ಮಾಡಲಿಲ್ಲ. ಆದರೂ ವಿಲಕ್ಷಣ ರೀತಿಯಲ್ಲಿ ಬೆಳೆಯುತ್ತಿತ್ತು: ಹುಟ್ಟಿದ ಹನ್ನೆರಡನೆಯ ದಿನ ಕುಲಪದ್ಧತಿಯಂತೆ ತಾಯಿತಂದೆಗಳು ಶಿಶುವನ್ನು ಪರಮಪದನಾಥಸ್ವಾಮಿಯ ದೇವಾಲಯಕ್ಕೆ ತೆಗೆದುಕೊಂಡು ಹೋಗಿ, ಸ್ವಾಮಿಯ ಮುಂದೆ ಮಲಗಿಸಿದರು. ಶಿಶುವು ಮೊದಲಬಾರಿಗೆ ಕಣ್ಣು ತೆರೆದು ಸ್ವಾಮಿಯ ವಿಗ್ರಹವನ್ನು ನೋಡಿತು. ಶಿಶುವು ಪರಮಾತ್ಮನ ಕಡೆಗೆ ಹೋಗುವ ಭಾವನೆ ಹೊಂದಿರಬಹುದೇನೋ ಎನ್ನುವಂತಾಯಿತು. ಅಂತೂ ಶಿಶುವಿಗೆ ಪರಮಾತ್ಮನ ಅನುಗ್ರಹ ಉಂಟಾಯಿತು. ಶಿಶುವಿನ ತಾಯಿ ತಂದೆಗಳು ಆಹಾರವಿಲ್ಲದೆ ಬೆಳೆಯುತ್ತಿದ್ದ ಮಗುವನ್ನು, ಗರ್ಭಗುಡಿಯ ಪಕ್ಕದಲ್ಲಿದ್ದ ಹುಣಿಸೆ ಮರದ ಪೊಟರೆಯಲ್ಲಿ ಸುರಕ್ಷಿತವಾದ ಸ್ಥಳದಲ್ಲಿ ಮಲಗಿಸಿ, ಅದನ್ನು ರಕ್ಷಿಸಬೇಕೆಂದು ಸ್ವಾಮಿಯನ್ನು ಬೇಡಿ, ಮನೆಗೆ ಹಿಂತಿರುಗಿದರು. ಹೀಗೆ ಬಹುಕಾಲ ಕಳೆಯಿತು. ಈ ಶಿಶುವೇ ಕಾಲಕ್ರಮದಲ್ಲಿ ಪರಾಂಕುಶ ಮುನಿಗಳಾದರು. ಇವರಿಗೆ ನಮ್ಮಾಳ್ವಾರ್, ಶಠಕೋಪರು, ಶಠಾರಿಮುನಿ, ಕಾರಿಮಾರಪ್ಪಿರಾ್– ಇತ್ಯಾದಿ ಹೆಸರುಗಳು ರೂಢಿಯಲ್ಲಿವೆ.

ಮಗುವಿನ ತೇಜಸ್ಸು ದಿನೇ ದಿನೇ ವೃದ್ಧಿಯಾಗುತ್ತಿತ್ತು. ಹೀಗೆ ಹದಿನಾರು ವರ್ಷಗಳು ಕಳೆದವು. ಈ ಕಾಲದಲ್ಲಿ ಮುನಿಗಳು ಪದ್ಮಾಸನಸ್ಥರಾಗಿ, ಪರತತ್ತ್ವ ಬೋಧಾಯುಕ್ತರಾಗಿ, ಕಣ್ಣು ತೆರೆಯದೆ, ಯಾರೊಡನೆಯೂ ಮಾತನಾಡದೆ ಧ್ಯಾನಾಸಕ್ತರಾಗಿ ಹುಣಿಸೆಮರದ ಪೊಟರೆಯಲ್ಲಿಯೇ ಇದ್ದರು. "ಸೇನೇಶಃ ಸ್ವಯಮಾಗಮ್ಯ ಪ್ರೀತ್ಯಾಂ ಶ್ರೀನಗರೀಂ ಶುಭಾಂ। ಶಠಕೋಪಾಯ ಮುನಯೇ ತಿಂತ್ರಿಣೀ ಮೂಲವಾಸಿನೇ। ತಾಪಾದಿ ಪೂರ್ವಕಂ ಮಂತ್ರಂ ದ್ವಯಂ ಶ್ಲೋಕಾಧಿಕಂ ಕ್ರಮಾತ್ ॥" ಎಂಬಂತೆ ತಪಸ್ಸಿನಲ್ಲಿ ನಿರತವಾಗಿದ್ದ, ಪರಾಂಕುಶ ಮುನಿಗಳಿಗೆ, ಪರಮಪದನಾಥನ ಅಪ್ಪಣೆಯಂತೆ ವಿಷ್ವಕ್ಸೇನರು ಏಕಾಂತದಲ್ಲಿ ಬಂದು ಪಂಚಸಂಸ್ಕಾರಾದಿಗಳನ್ನು ಮಾಡಿದರು. ಪರಮಾತ್ಮನು ಭೂ ನೀಳಾಲಕ್ಷ್ಮೀಸಮೇತನಾಗಿ ಗರುಡಾರೂಢನಾಗಿ ಬಂದು ದರ್ಶನಭಾಗ್ಯವಿತ್ತನು. ತನ್ನ ಸ್ವರೂಪ ವಿಭವಾದಿಗಳನ್ನು ಅನುಭವಿಸುವ ಹಾಗೆ ಕರುಣಿಸಿದನು. ಹೀಗೆ ಪರಾಂಕುಶ ಮುನಿಗಳು ಸಂಪೂರ್ಣ ಭಗವತ್ಕಟಾಕ್ಷಕ್ಕೆ ಪಾತ್ರರಾಗಿ ಸಂಪೂರ್ಣ ಮನೋರಥರಾಗಿ ಭಗವದನುಭಾವದಲ್ಲಿದ್ದರು. ಆ ಕಾಲದಲ್ಲಿ ಪರಮಾತ್ಮನೇ ತಮಗೆ ಧಾರಕ, ಪ್ರೇರಕ, ಪೋಷಕನಾಗಿದ್ದನೆಂದು ಅವರು ತಮ್ಮ ಗ್ರಂಥದಲ್ಲಿ ಸ್ಮರಿಸಿದ್ದಾರೆ.

ಹೀಗೆ ಬಹುಕಾಲ ಯೋಗಾರೂಢರಾಗಿದ್ದ ಪರಾಂಕುಶಮುನಿಗಳು ಬಹಿರ್ಮುಖರಾದುದು ಆಶ್ಚರ್ಯಕರವಾಗಿದೆ. ಮಧುರಕವಿ ಎಂಬ ಆಳ್ವಾರರು ಗಂಗಾಸ್ನಾನಕ್ಕಾಗಿ ಕಾಶಿಗೆ ಹೋಗಿದ್ದಾಗ, ಅವರಿಗೆ ಆಕಾಶದಲ್ಲಿ ಒಂದು ತೇಜಃಪುಂಜವು ಕಾಣಿಸಿತು, ಅದನ್ನು ಅವರು ನೋಡಿದಾಗ ಅದು ದಕ್ಷಿಣಕ್ಕೆ ಹೋಗುವ ಸೂಚನೆ ಕಂಡಿತು. ಅದನ್ನು ಅನುಸರಿಸಿ ಆಳ್ವಾರರು ಹೊರಟರು. ತೇಜಃಪುಂಜವು ದಕ್ಷಿಣದ ಆಳ್ವಾರ್ ತಿರುನಗರಿಯವರೆಗೂ ಬಂದು ಅಲ್ಲಿ ಮಾಯವಾಯಿತು. ಅಲ್ಲಿ ವಿಶೇಷವೇನೆಂದು ಆಳ್ವಾರರು ವಿಚಾರಿಸಲು ಪರಮಪದನಾಥನ ದೇವಾಲಯದಲ್ಲಿ ಯೋಗಾರೂಢರಾಗಿದ್ದ ಪರಾಂಕುಶಮುನಿಗಳ ವಿಷಯವು ಗೊತ್ತಾಯಿತು. ಆಳ್ವಾರರು ನೇರವಾಗಿ ಅಲ್ಲಿಗೆ ಬಂದು, ಹುಣಿಸೆ ಮರದ ಪೊಟರೆಯಲ್ಲಿ ಯೋಗಸ್ಥಿತಿಯಲ್ಲಿದ್ದ ಮುನಿಗಳನ್ನು ಕಂಡು ಭಕ್ತಿಯಿಂದ ನಮಸ್ಕರಿಸಿ ಅವರನ್ನು ತಮ್ಮ ಗುರುಗಳನ್ನಾಗಿ ಸ್ವೀಕರಿಸಿ ಅವರ ಸೇವೆಯಲ್ಲಿ ನಿರತರಾದರು. ಮುನಿಗಳು ಶಿಷ್ಯರನ್ನು ಕಣ್ಣು ತೆರೆದು ನೋಡಲಿಲ್ಲ, ಮಾತನಾಡಲಿಲ್ಲ. ಆದರೂ ಶಿಷ್ಯರಿಗೆ ಗುರುಗಳಲ್ಲಿ ಬಹು ಗೌರವ ಮತ್ತು ಭಕ್ತಿ ವೃದ್ಧಿಯಾಯಿತು.

ಒಂದು ದಿವಸ ಶಿಷ್ಯರು ಗುರುಗಳ ಮುಂದೆ ಕೈಮುಗಿದು ನಿಂತು "ಶೆತ್ತತ್ತಿನ್ ವಯತ್ತಿಲೇ ಶಿರಿಯದು ಪಿರಂದಾಲ್ ಎತ್ತೈತಿನ್ರು ಎಂಗೇ ಕಿಡಕ್ಕುಂ" – ಅಚೇತನವಾದ ಶರೀರ ಚೇತನನಾದಾಗ ಪ್ರಾಕೃತನಾದ ಈ ಶರೀರದಲ್ಲಿ ಹುಟ್ಟಿ ಯಾವುದನ್ನು ತಿಂದು ಎಲ್ಲಿ ಜೀವಿಸುವುದು? ಎಂದು ಪ್ರಾರ್ಥಿಸಿದರು. 'ಅತ್ತೈ ತಿನ್ರು ಅಂಗೇಕಿಡಕ್ಕುಂ' ಎಂಬ ಉತ್ತರ ತಕ್ಷಣ ಬಂದಿತು. ಅಂದರೆ ಪ್ರಾಕೃತವಾದ ಅನ್ನವನ್ನು ತಿಂದು ಪ್ರಾಕೃತ ಸುಖ ದುಃಖಗಳನ್ನು ಅನುಭವಿಸಿ ಪ್ರಕೃತಿಯಲ್ಲಿ ಜೀವಿಸುವನು ಎಂದು ಅರ್ಥ. ಈ ಉತ್ತರದಿಂದ ಪೂರ್ಣತೃಪ್ತರಾಗಿ, ಇವರು ಸಾಮಾನ್ಯ ವ್ಯಕ್ತಿಯಲ್ಲವೆಂದೂ, ಯೋಗರಹಸ್ಯ ಮತ್ತು ವೇದಾಂತ ಶಾಸ್ತ್ರ ತಿಳಿದ ಮಹಾತ್ಮರೆಂದೂ ಶಿಷ್ಯರು ಭಾವಿಸಿದರು. ಇವರನ್ನು ತಮ್ಮ ಗುರುಗಳನ್ನಾಗಿ ವರಿಸಿ, ಅವರ ಸೇವೆ ಮಾಡುತ್ತ, ತಮಗೆ ಉಪದೇಶ ಮಾಡುವಂತೆ ಪ್ರಾರ್ಥಿಸಿದರು. ಅನಂತರ ಪರಾಂಕುಶ ಮುನಿಗಳು ಬಹಿರ್ಮುಖರಾಗಿ ಪರಮಾತ್ಮನ ಸಂಕಲ್ಪದಂತೆ ತಾವು ತಿಳಿದುಕೊಂಡ ಭಗವದನುಭವವನ್ನೂ, ವೇದಾಂತ ತತ್ತ್ವಗಳನ್ನೂ ಮಧುರಕವಿಗಳಿಗೆ ಉಪದೇಶಮಾಡಿದರು. ಅವೆಲ್ಲವೂ ದಿವ್ಯಪ್ರಬಂಧ ರೂಪದಲ್ಲಿವೆ.

ಪರಾಂಕುಶ ಮುನಿಗಳು, ತಿರುವಿರುತ್ತಂ, ತಿರುವಾಶಿರಿಯಂ, ಪೆರಿಯತಿರುವಂದಾದಿ ಮತ್ತು ತಿರುವಾಯ್‌ಮೊಳಿ ಎಂಬ ನಾಲ್ಕು ಪ್ರಬಂಧಗಳನ್ನು ರಚಿಸಿದ್ದಾರೆ: ಇವು ನಾಲ್ಕೂ ನಾಲ್ಕು ವೇದಕ್ಕೆ ಸಮಾನವಾಗಿವೆ. ತಿರುವಿರುತ್ತಂ, ಋಗ್ವೇದದ ಸಾರವಾಗಿ ಪ್ರಕೃತಿ ಸಂಬಂಧವನ್ನು ಅಪೇಕ್ಷಿಸುವ ವಿವರಣೆಯನ್ನೊಳಗೊಂಡಿದೆ. ತಿರುವಾಶಿರಿಯಂ ಯಜುರ್ವೇದದ ಸಂಗ್ರಹವಾಗಿ ಪರಮಾತ್ಮನ ಸೌಂದರ್ಯಾದಿ ಅನುಭವವನ್ನು ಪ್ರತಿಪಾದಿಸುತ್ತದೆ. ಪೆರಿಯತಿರುವಂದಾದಿಯು ಅಥರ್ವವೇದದ ಸಾರವಾಗಿದೆ. ಇಲ್ಲಿ ಪರಮಾತ್ಮನ ಉತ್ಕಟ ಪ್ರೀತಿರೂಪವಾದ ಭಕ್ತಿ ಪ್ರಕರ್ಷವು ನಿರೂಪಿತವಾಗಿದೆ. ತಿರುವಾಯ್‌ಮೊಳಿಯು ಸಾಮವೇದದ ಸಂಗ್ರಹರೂಪ. ಇದರಲ್ಲಿ ಪರಭಕ್ತಿ, ಪರಜ್ಞಾನ, ಮತ್ತು ಪರಮಭಕ್ತಿರೂಪವಾದ ಮೋಕ್ಷಸ್ವರೂಪವನ್ನೂ, ನಿರತಿಶಯವಾದ ಫಲಪ್ರಾಪ್ತಿಯನ್ನೂ, ವಿಶದವಾಗಿ ತಿಳಿಸಲಾಗಿದೆ. ತಿರುವಾಯ್‌ಮೊಳಿಯನ್ನು ಭಗವದ್ವಿಷಯ ಎಂದು ಕರೆಯಲಾಗಿದೆ. ಈ ದಿವ್ಯಪ್ರಬಂಧವು, ಅತ್ಯಂತ ವೈಭವಯುತವೂ, ಆಸ್ವಾದ್ಯತಮವೂ, ಜಡಜನೋದ್ಧಾರಕವೂ, ಮತ್ತು ಮೋಕ್ಷಪ್ರದವೂ ಆಗಿದೆ.

ತಿರುವಿರುತ್ತಂ ದಿವ್ಯಪ್ರಬಂಧವನ್ನು ಯಾರು ಭಕ್ತಿಯಿಂದ ಪಾರಾಯಣ ಮಾಡುವರೋ, ಅಥವ ಓದಿಸಿ ಕೇಳುವರೋ. ಅವರು ಮೋಕ್ಷ ಪಡೆಯುವರು ಎಂದು ತಿಳಿಸಲಾಗಿದೆ. ಇದನ್ನು ಮಂತ್ರವತ್ತಾಗಿ, ಅಥವ ಮಂತ್ರ ಸರಣಿಯಲ್ಲಿ ವ್ಯಾಸಂಗಮಾಡಿದರೆ ಪರಮಾತ್ಮನ ಸ್ವರೂಪ, ಸೌಂದರ್ಯಾದಿಗಳನ್ನು ತಿಳಿಯಬಹುದು. ಇದು ಬ್ರಹ್ಮಾನುಭವರೂಪವಾಗಿದೆ. ದೇಹಾತ್ಮ ಭ್ರಮೆ ಉಂಟಾಗದಂತೆ ಮಾಡುವುದು. ಚೇತನನ ಉದ್ಧಾರಕ್ಕಾಗಿ ಪರಮಾತ್ಮನು ಅವತಾರಮಾಡುವನೆಂಬ

ಭಾವನೆ ಮೂಡಿಸುವುದು. "ಅಡಿಯೇ್ರ ಶೆಯ್ಯುಂ ವಿಣ್ಣಪ್ಪಂ" ಎಂಬ ಪದಗಳು ಆಗಾಗ ಬರುವುದ ರಿಂದ ಇದು ಪ್ರಾರ್ಥನಾರೂಪವಾಗಿದೆ ಎಂದು ತಿಳಿಯಬಹುದು.

ಅಜ್ಞಾನಾಂಧಕಾರದಲ್ಲಿ ತೊಳಲುತ್ತಿರುವ ಆತ್ಮನು, ವಿಶ್ವಾತೀತನಾದ ಪರಮಾತ್ಮನನ್ನು ಹುಡುಕಿಕೊಂಡು ಹೋಗುವ ಯಾತ್ರಾವಿಧಾನವೇ ತಿರುವಿರುತ್ತದ ಪ್ರಧಾನ ವಿಷಯವಾಗಿದೆ. ಆತ್ಮನ ಮುಖ್ಯ ಉದ್ದೇಶ ಪರಮಾತ್ಮನನ್ನು ಸೇರುವುದು. ಅದೇ ನಿಜವಾದ ಮತ್ತು ಎಚ್ಚರವಾದ ಪರಿಸ್ಥಿತಿ. ಪರಾಂಕುಶ ಮುನಿಗಳು ಪ್ರಾರ್ಥನೆಯ ಮೂಲಕ, ಸ್ತೋತ್ರದ ಮೂಲಕ, ಪರಮಾತ್ಮನ ನಿರಂತರ ನಾಮಸ್ಮರಣೆಯ ಮೂಲಕ, ತಮ್ಮಲ್ಲಿ ಸುಪ್ತ ವಾಗಿರುವ ನಿಜಸ್ವರೂಪವನ್ನು ವಿವರಿಸುವುದರ ಮೂಲಕ, ತಮ್ಮ ಪ್ರಯತ್ನವನ್ನು ಮುಂದುವರಿಸಿ ಯಶಸ್ವಿಯಾಗಿದ್ದಾರೆ. ಹೀಗೆ ಆತ್ಮನು ಪರಮಾತ್ಮ ನನ್ನು ಹುಡುಕುತ್ತ, ಹತ್ತಿಹೋಗುವ ಪ್ರಯತ್ನ ದಲ್ಲಿ ಉಂಟಾಗುವ ವಿವಿಧ ಪರಿಸ್ಥಿತಿಯನ್ನೂ, ತಿಳಿವಳಿಕೆಯನ್ನೂ, ಆಕರ್ಷಕ ರೀತಿಯಲ್ಲಿ ಮುನಿ ಗಳು ವಿವರಿಸಿದ್ದಾರೆ. ತಿರುವಿರುತ್ತದಲ್ಲಿ ವಿವರಿ ಸಿರುವ ವಿಷಯವನ್ನು ತಿರುವಾಯ್‌ಮೊಳಿಯಲ್ಲಿ ಹೆಚ್ಚು ವಿಸ್ತರಿಸಲಾಗಿದೆ.

ಪರಾಂಕುಶ ಮುನಿಗಳ ಎರಡನೆಯ ದಿವ್ಯ ಪ್ರಬಂಧ ತಿರುವಾಶಿರಿಯಂ. ಇದು ಪರಮಾತ್ಮನ ಆರಾಧನಾಕ್ರಮವನ್ನು ತಿಳಿಸುವುದು. ಇಲ್ಲಿ ಬರುವ ಪ್ರತಿಯೊಂದು ಪ್ರಾರ್ಥನೆಯೂ ಒಂದೊಂದು ಕ್ರಿಯೆಯನ್ನು ಒಳಗೊಂಡಿದೆ. ಇದು ಶ್ರೇಷ್ಠವಾದ ಮತ್ತು ಪವಿತ್ರವಾದ ಪರಮಾತ್ಮನ ಉಪಾಸನೆ ಎಂದು ಸೂಚಿಸಲಾಗಿದೆ. ಈ ಪ್ರಬಂಧದಲ್ಲಿ ಪರಮಾತ್ಮನ ವಿಶ್ವರೂಪ, ಮತ್ತು ತ್ರಿವಿಕ್ರಮಾವ ತಾರದ ವೃತ್ತಾಂತವನ್ನು ವರ್ಣಿಸಲಾಗಿದೆ. ಪರತತ್ತ್ವವನ್ನು ವಿವಿಧ ರೀತಿಯಲ್ಲಿ ವಿವರಿಸಿರುವ ಪರಾಂಕುಶಮುನಿಗಳು ಪರಮಾತ್ಮ ಸಾನ್ನಿಧ್ಯ ಪಡೆಯಲಿಕ್ಕಿರುವ ಅಡ್ಡಿ ಆತಂಕಗಳನ್ನು ತಿಳಿಸಿದ್ದಾರೆ. ಅವರು ಪ್ರಾಚೀನ ಋಷಿಗಳಂತೆ, ಶ್ರಿಯಃಪತಿಯೇ ಸರ್ವೇಶ್ವರನು, ಸೃಷ್ಟಿಕರ್ತನು, ಮೋಕ್ಷಪ್ರದನು ಎಂದು ದೃಢವಾಗಿ ನಂಬಬೇಕೆಂದು ಉಪದೇಶ ಮಾಡಿದ್ದಾರೆ.

ಪೆರಿಯ ತಿರುವಂದಾದಿಯಲ್ಲಿ ಪರಾಂಕುಶ ಮುನಿಗಳು ಒಂದುಕಡೆ ಹೀಗೆ ಹೇಳಿದ್ದಾರೆ. "ಹೇ! ಸರ್ವೇಶ್ವರಾ! ನನ್ನ ಮನಸ್ಸು ನಿನ್ನನ್ನೇ ಉಪಾಸನೆ ಮಾಡುತ್ತಿದೆ–ನಿನ್ನ ಸನ್ನಿಧಾನ ಪಡೆಯುವುದೇ ನನ್ನಗುರಿ. ಅಷ್ಟ ವಸುಗಳು, ಏಕಾದಶ ರುದ್ರರು, ದ್ವಾದಶಾದಿತ್ಯರು, ಅಶ್ವಿನೀದೇವತೆಗಳು ಇವರೆಲ್ಲರಿಗಿಂತ ನೀನು ಪ್ರತ್ಯೇಕ. ನಿನ್ನನ್ನು ಬಿಟ್ಟರೆ, ನನ್ನ ಆಶ್ರಯಕ್ಕೆ ಇನ್ನಾರೂ ಗತಿಯಿಲ್ಲ. ಹೇ! ಮನಸ್ಸೇ! ನನ್ನ ಪಾಪವು ಅತ್ಯಂತ ಭೀಕರವಾದುದು. ಆದರೂ ನನಗೊಂದು ಧೈರ್ಯ. ಉದ್ದೇಶಮಾತ್ರ ದಿಂದ ಪರಮಾತ್ಮನನ್ನು ಪಡೆಯಲು ಸಾಧ್ಯವಿಲ್ಲ. ನನ್ನ ಅಹಂಕಾರ ಮಮಕಾರಗಳ ತ್ಯಾಗದಿಂದ ಮತ್ತು ಅಕಿಂಚನ್ಯ ಅನನ್ಯ ಗತಿತ್ವದಿಂದ ಮಾತ್ರ ಸಾಧ್ಯ. ಸ್ವಾಮಿಯ ದಾಸನಾಗುವುದರಿಂದ, ಅವನ ಪಾದುಕೆಯ ಆಶ್ರಯದಿಂದ ಮಾತ್ರ ಸಾಧ್ಯ. ಹೇ! ಮನಸ್ಸೇ! ಪರಮಾತ್ಮನಿಗೆ ಶರಣಾಗತನಾಗು. ನೀನು ಅವನಿಗೆ ಪೂರ್ಣ ಪರತಂತ್ರನು. ಇದು ಆತ್ಮನ ಹತ್ತಿರಕ್ಕೆ ಪರಮಾತ್ಮನು ಬರುವಂತೆ ಮಾಡುವುದು" ಎಂದು ಮುನಿಗಳು ಪರಮಾತ್ಮಾ ನುಭವವನ್ನು ಸ್ಪಷ್ಟಪಡಿಸಿದ್ದಾರೆ.

ಪೆರಿಯತಿರುವಂದಾದಿಯಲ್ಲಿ, ಪರಮಾತ್ಮನನ್ನು ಮಾತಾ, ಪಿತಾ, ಆಚಾರ್ಯಾ ಎಂದು ವರ್ಣಿಸ ಲಾಗಿದೆ. "ಹೇ! ಪರಮಾತ್ಮಾ! ನನ್ನನ್ನು ಬೆಳಸಿದ ತಾಯಿ ನೀನು. ಸೃಷ್ಟಿಸಿದ ತಂದೆ ನೀನು. ಜ್ಞಾನವನ್ನು ಉಪದೇಶಮಾಡಿದ ಆಚಾರ್ಯ ನೀನು. ನನ್ನನ್ನು ಏಕೆ ಬೆಳಸಿದೆ? ನನ್ನ ಪಾಪವನ್ನು ಪರಿ ಹಾರಮಾಡುವುದಕ್ಕಲ್ಲವೇ? ಹೇ! ಸ್ವಾಮೀ! ನೀನು ಮಾಡಿರುವ ಉಪಕಾರಗಳಿಗೆ ಕೊನೆ ಮೊದಲೇ ಇಲ್ಲ. ತಾಯಿಯಂತೆ ಪ್ರೀತಿಸಿರುವೆ. ತಂದೆಯಂತೆ ಹಿತವನ್ನುಂಟುಮಾಡಿರುವೆ. ಆಚಾರ್ಯ ನಂತೆ ತಿಳಿವಳಿಕೆಯನ್ನು ಉಪದೇಶಮಾಡಿರುವೆ. ಮಹಾ ವಂಚಕಳಾದ ಪೂತನಿಯನ್ನು ಸಂಹಾರ ಮಾಡಲು, ಅವಳ ವಿಷಪೂರಿತ ಸ್ತನ್ಯವನ್ನು ಪಾನಮಾಡಿ, ನೀನು ತೋರಿಸಿದ ದಾರಿ ಎಷ್ಟು ಆಶ್ಚರ್ಯಕರವಾದುದು?

"ತಾನು ಮಾಡಬೇಕಾದುದೇನು ಎಂಬುದನ್ನು ತಿಳಿಯದೆ ಅಲೆದಾಡುವ ಹೇ! ಮನಸ್ಸೆ! ಭಗವ ದ್ವಿಷಯವನ್ನು ಹೇಳುವುದರಿಂದ ನಿನಗೆ ಯಾವ ಕೊರತೆಯೂ ಇಲ್ಲ. ಜನನವನ್ನೂ ಮರಣವನ್ನೂ, ಮುಪ್ಪನ್ನೂ, ಮತ್ತು ವ್ಯಾಧಿಗಳನ್ನೂ ನೀಗಿಸಿ, ಆನಂದವನ್ನುಂಟುಮಾಡುವ ಪರಮಾತ್ಮನ ಪಾದ ಕಮಲಗಳನ್ನು ಮಂಗಳಾಶಾಸನ ಮಾಡಿ ಕೃತಾರ್ಥನಾಗು" ಎಂದು ಮುನಿಗಳು ಉಪದೇಶ ಮಾಡಿದ್ದಾರೆ.

ಪರಾಂಕುಶಮುನಿಗಳ ನಾಲ್ಕನೆಯ ದಿವ್ಯ ಪ್ರಬಂಧ ತಿರುವಾಯ್‌ಮೊಳಿ. ಇದು ವಿಷಯ ವಿಸ್ತಾರವಾದುದು ಮತ್ತು ದೀರ್ಘವಾದುದು ಇದರಲ್ಲಿ 1102 ಪಾಶುರಗಳಿವೆ. ಇದು ಪರಮಾ ತ್ಮನ ಸ್ವರೂಪ ಮತ್ತ ಸ್ವಭಾವಾದಿಗಳನ್ನು ಬಹು ಚೆನ್ನಾಗಿ ವಿವರಿಸುವುದು. ದೈವಿಕವಾಗಿ ವ್ಯಕ್ತ ವಾದ ಜ್ಞಾನಕ್ಕೆ ಇದನ್ನು ಹೋಲಿಸಬಹುದು.



# ಶ್ರೀವೈಷ್ಣವ ಗುರುಶಿಷ್ಯರು

## ಮಧುರಕವಿ-ನಮ್ಮಾಳ್ವಾರ್

ಇವರಿಬ್ಬರೂ ಹನ್ನೆರಡು ಆಳ್ವಾರರೆಂದು ಪ್ರಸಿದ್ಧರಾದ ವಿಷ್ಣು ಭಕ್ತರಲ್ಲಿ ಹೆಸರಾಂತವರು. ಮಧುರ ಕವಿಗಳು ಮೇಷಮಾಸದ ಚಿತ್ತಾನಕ್ಷತ್ರದಲ್ಲಿ ತಿರುಕ್ಕೋಳೂರ್ ಎಂಬ ಸ್ಥಳದಲ್ಲಿ, ಸೂರ್ಯೋದಯಕ್ಕೆ ಮುಂಚೆ ಅರುಣೋದಯವಾದಂತೆ, ನಮ್ಮಾಳ್ವಾರರಿಗೆ ಮೊದಲೇ ಜನಿಸಿದರು. ಜ್ಞಾನ ಭಕ್ತಿ ವೈರಾಗ್ಯಪೂರ್ಣರಾದ ಇವರು, ಮುಕ್ತಿದಾಯಕಗಳಾದ ಸಪ್ತನಗರಗಳನ್ನು ದರ್ಶಿಸಲು ಉತ್ತರ ದೇಶಯಾತ್ರೆ ಮಾಡುತ್ತಿದ್ದಾಗ, ಒಂದು ದಿನ ದಕ್ಷಿಣ ದಿಕ್ಕಿನಲ್ಲಿ ಅಪ್ರಾಕೃತವಾದ ದಿವ್ಯ ತೇಜಸ್ಸನ್ನು ಕಂಡು, ಯಾವುದೋ ಕಡೆ ಬೆಂಕಿ ಹತ್ತಿ ಉರಿಯುತ್ತದೆ ಅಥವಾ ಯಾವುದೋ ದಾವಾಗ್ನಿ ಇರಬಹುದೆಂದುಕೊಂಡರೂ, ಮಾರನೇ ದಿನವೂ ಮತ್ತೆ ದಿನದಿನವೂ, ಆ ತೇಜಸ್ಸು ಕಂಡು ಬರುವುದನ್ನು ಯೋಚಿಸುತ್ತ ಇದು ಕೇವಲ ಅಗ್ನಿಯಿಂದಾದ ಉರಿಯಲ್ಲ ಯಾವುದೋ ದಿವ್ಯತೇಜಸ್ಸಿರಬಹುದೆಂದು ರಾತ್ರಿಕಾಲದಲ್ಲಿ ಆ ತೇಜಸ್ಸಿರುವ ದಿಕ್ಕಿಗೆ ಪ್ರಯಾಣಮಾಡುತ್ತಾ ಬಂದು, ತಿರುನಗರಿ ಎಂಬ ಊರಿಗೆ ದಕ್ಷಿಣದಲ್ಲಿ ಅಂತಹ ತೇಜಸ್ಸನ್ನು ಕಾಣದೇ, ಆ ಊರಲ್ಲಿ ಏನಾದರೂ ವಿಶೇಷವಿರಬೇಕೆಂದು, ವಿಚಾರಿಸಿದಾಗ, ಅಲ್ಲಿದ್ದ ಜನರು 'ಈ ಊರಲ್ಲಿ ಹದಿನಾರು ವರುಷಗಳ ಹಿಂದೆ, ತಾಮ್ರ ಪರ್ಣಿ ನದಿಯ ದಡದಲ್ಲಿರುವ ತಿರುಕ್ಕುರುಕೂ ರೆಂಬ ಊರಲ್ಲಿ 'ಕಾರಿ' ಎಂಬುವರಿಗೂ 'ಉಡೈಯನಂಗೆ' ಎಂಬುವರಿಗೂ ಅತಿಶಯವಾದ ಮಗುವೊಂದು ಜನಿಸಿ, ಯಾವ ವಿಧವಾದ ಆಹಾರ, ಹಾಲೂ ಕೂಡ ಸೇವಿಸದೇ ಇದ್ದು, ಆ ಚಲಿಸದಿದ್ದ ಮಗುವನ್ನು ಈ ಊರಿನಲ್ಲಿರುವ ಒಂದು ಹುಣಸೇಮರದ ಪೊಟರೆಯಲ್ಲಿಟ್ಟಿರುವುದಾಗಿಯೂ, ಅದು ದಿನೇದಿನೇ ವೃದ್ಧಿಯಾಗಿ ತೇಜಸ್ವಿಯಾಗಿ ಬೆಳಗುತ್ತಿರುವುದೆಂದೂ' ತಿಳಿಸಿದಾಗ, ವಿಸ್ಮಯ ಗೊಂಡ, ಮಧುರಕವಿಗಳು ಅಲ್ಲಿಗೆ ಹೋಗಿ, ಆ ತೇಜೋರಾಶಿಯ ಅತ್ಯದ್ಭುತ ದೃಶ್ಯವನ್ನು ಕಂಡು, ಅವರಿಗೆ ಕಣ್ಣು ಬಾಯಿಗಳಿದ್ದು, ಮಾತನಾಡುವಶಕ್ತಿ ಇದೆಯೇ, ಜ್ಞಾನವಿದೆಯೇ ಎಂದು ಪರೀಕ್ಷಿಸುವ ಸಲುವಾಗಿ, ಒಂದು ಕಲ್ಲನ್ನು ಎತ್ತಿ ಮತ್ತೊಂದು ಕಲ್ಲಿನ ಮೇಲೆ ಒಗೆದಾಗ, ಕಣ್ಣು ತೆರೆಯಲು ಕಾಲಬಂದಿತೆಂದೋ, ಯೋಗ್ಯ ಶಿಷ್ಯನು ತಮ್ಮನ್ನರಿಸಿ ಬಂದನೆಂದೋ, ಮುಚ್ಚಿದ್ದ ಕಣ್ಣನ್ನು ನಮ್ಮಾಳ್ವಾರರು ತೆರೆದು ನೋಡಿದರು. ಮಧುರಕವಿಗಳು ಅವರ ವಾಕ್‌ಶಕ್ತಿಯನ್ನು ತಿಳಿಯಲು ಶೆತ್ತತ್ತಿನ್ ವಯಿತ್ತಿಲೇ ಶಿರಿಯದು ಪಿರಂದಾಲ್ ಎತ್ತೈತಿನ್ನು ಎಂಗೇ ಕಿಡಕ್ಕು (ಅಚಿತ್ತಿನೊಡನೆ ಜೀವಾತ್ಮ ಸಂಬಂಧವುಂಟಾದಾಗ, ಅದು ಯಾವುದನ್ನು ಅನುಭವಿಸಿ ಎಲ್ಲಿರುತ್ತದೆ) ಎಂದು ಕೇಳಿದಾಗ, ಆಳ್ವಾರರು "ಅತ್ತೈತಿನ್ನು ಅಂಗೇ ಕಿಡಕ್ಕುಂ" (ಶರೀರಗತವಾದ ಸುಖದುಃಖಗಳನ್ನನುಭವಿಸುತ್ತಾ ಆ ಶರೀರವನ್ನೇ ಆಶ್ರಯಿಸಿರುತ್ತದೆ) ಎಂದುತ್ತರಿಸಿದರು. ಹಿರಿಯರ ಅಭಿಪ್ರಾಯದಂತೆ, ಪ್ರಕೃತಿಯಲ್ಲಿ ಬಿದ್ದ ಜೀವಾತ್ಮನಿಗೆ ಜ್ಞಾನೋದಯವಾದರೆ, ಅದು ಪ್ರಕೃತಿಯಲ್ಲಿರದೇ ಪರಮಾತ್ಮಾನುಭವದಲ್ಲಿ ಕಾಲಕಳೆಯುತ್ತದೆ ಎಂಬರ್ಥ ಪ್ರತಿಪಾದಿಸಲ್ಪಡುತ್ತದೆ ಎನ್ನುವುದು. ಇದನ್ನು ಕೇಳಿದ ಮಧುರಕವಿಗಳು, ಸ್ವತಃ ಮಹಾವಿದ್ವಾಂಸರಾಗಿದ್ದುದರಿಂದ, ಅರ್ಥಸ್ವಾರಸ್ಯವನ್ನು ಗ್ರಹಿಸಿ ಆ ಆಳ್ವಾರರ ಪಾದಸೇವನೆಯೊಂದರಲ್ಲೇ ನಿರತರಾಗಿ, ಮತ್ತಾವ ದೈವವನ್ನೂ ಸ್ಮರಿಸದೇ, ಪಂಚಮೋಪಾಯ ನಿಷ್ಠರಾಗಿ ಮೋಕ್ಷ ಹೊಂದಿದರು. ಮಧುರಕವಿಗಳು ತಮಗೆ ದಿವ್ಯಜ್ಞಾನವನ್ನುಂಟು ಮಾಡಿದ ಉಪಕಾರ ಸ್ಮರಣೆಯಿಂದ ಆ ಆಳ್ವಾರರನ್ನೇ ಪರದೈವವಾಗೆಣಿಸಿ, ಸರ್ವಸುಲಭನಾಗಿ ಕೃಷ್ಣನಾಗಿ ಅವತರಿಸಿ, ಯಶೋದಾದೇವಿಯು, ತನ್ನನ್ನು ಬೆದರಿಸಿ ಹಗ್ಗದಿಂದ ಕಟ್ಟುವಷ್ಟು ಮಟ್ಟಿಗೆ ಆಗಿದ್ದರೂ, ಅಂತಹದೈವವೂ ತನಗೆ ಬೇಡವೆಂದೂ, ತಿರುಕ್ಕುರುಕೂರ್ ನಂಬಿಯಾದ ನಮ್ಮಾಳ್ವಾರರ ನಾಮವೇ ತಮ್ಮ ನಾಲಿಗೆಗೆ ಅಮೃತಪ್ರಾಯವೆಂದೂ ದೃಢಭಕ್ತಿಯಿಂದ ಅವರ ಪರವಾಗಿ ಹನ್ನೊಂದು ಪಾಶುರ (ಶ್ಲೋಕ)ಗಳುಳ್ಳ 'ಕಣ್ಣಿನುಣ್ ಶಿರುತ್ತಾಂಬು' ಎಂಬ ಸ್ತೋತ್ರವನ್ನು ಪಾಡಿದರು. 'ಕಣ್ಣಿನುಣ್ ಶಿರುತ್ತಾಂಬಿನಾಲ್ ಕಟ್ಟುಣ್ಣಪ್ಪಣ್ಣಿಯ ಪೆರುಮಾಯನ್ —ಎನ್ನಪ್ಪನಿಲ್ ನಣ್ಣಿತ್ತೆನ್ ಕುರುಕೂರ್ ನಂಬಿ ಎನ್ನಕ್ಕಾಲ್, ಅಣ್ಣಿಕ್ಕುಂ ಅಮುದೂರುಂ ಎನ್ನಾವುಕ್ಕೇ, ಎಂಬುದು ಮೊದಲನೇ ಶ್ಲೋಕ. "ತೇವು ಮತ್ತರಿಯೇನ್" (ಬೇರೆದೈವ ಕಾಣೆ) ಎಂದೂ 'ಅನ್ನೈಯಾಯ್ ಅತ್ತನಾಯ್ ಎನ್ನೈ ಆಂಡಿಡುಂ ತನ್ಮೈಯಾನ್' (ತಾಯಿಯಾಗಿ ತಂದೆಯಾಗಿ ನನ್ನನ್ನಾಳುವ ಸ್ವಭಾವದವರಿವರು) ಎಂದೂ "ಪಯನನ್ನಾಕಿಲುಂ ಪಾಂಗಲರಾಗಿಲುಂ ಶೆಯಲ್ ನನ್ನಾಕತಿರುತ್ತಿಪ್ಪಣಿ ಕೊಳ್ವಾನ್" (ಅಪ್ರಯೋಜಕನೂ, ಅನನುಕೂಲನೂ ಆದ ತನ್ನನ್ನು ಒಳ್ಳೆಯ ಜ್ಞಾನಾನುಷ್ಠಾನ ಸಂಪತ್ತುಗಳನ್ನು ಹೊಂದುವಂತೆ ತಿದ್ದಿ ಭಾಗವತಾಚಾರ್ಯರ ಸೇವೆಯಲ್ಲಿ ನಿರತನಾಗುವಂತೆ ಮಾಡಿದವರಿವರು) ಎಂದೂ ಈ ಪಾಶುರಗಳಲ್ಲಿ ಸ್ತೋತ್ರಮಾಡಿದ್ದಾರೆ. ಇಲ್ಲಿ ಸದಾಚಾರ್ಯರು ಯಾವಾಗಲೂ ಸಚ್ಛಿಷ್ಯನನ್ನು ಕಾಣಲು ಆಶಿಸಿ, ಅಂತಹ ಸಮಯಕ್ಕಾಗಿ ಕಾದು, ಅಂತಹ ಒಳ್ಳೆಯ ಶ್ರದ್ಧಾಳುವಾದ ಶಿಷ್ಯನು ಬಂದಾಗ ಅವನಿಗೆ ಜ್ಞಾನೋಪದೇಶ ಮಾಡುತ್ತಾರೆ. ಎಂಬಂಶ ಸ್ಪಷ್ಟವಾಗುತ್ತದೆ. ಶಿಷ್ಯನ ಗುರುವಿಷಯಕ ಏಕಭಕ್ತಿ ಇಲ್ಲಿ ಆದರ್ಶವಾಗಿದೆ.

## ನಾಥಮುನಿ - ನಮ್ಮಾಳ್ವಾರ್

ಇವರ ಚರಿತ್ರೆಯಲ್ಲಿ ಒಂದು ವೈಶಿಷ್ಟ್ಯ ಇದೆ. ಇವರಿಬ್ಬರೂ ಸಮಕಾಲೀನರಲ್ಲ, ಇವರು ಗುರುಶಿಷ್ಯರಾದ ಬಗ್ಗೆ ಗುರು ಪರಂಪರಾಪ್ರಭಾವಾದಿ ಗ್ರಂಥಗಳಲ್ಲಿ ನೋಡಬಹುದು. ಮಧುರ ಕವಿಗಳು ನಮ್ಮಾಳ್ವಾರರ ಸಾಕ್ಷಾತ್ ಶಿಷ್ಯರು. ನಾಥಮುನಿಗಳು ಪರೋಕ್ಷಮಾನಸಿಕ ಶಿಷ್ಯರು. ಇವರು ಆಳ್ವಾರರು ಅನುಗ್ರಹಿಸಿದ ದಿವ್ಯಸೂಕ್ತಿಗಳನ್ನು ಬಹುಮುಖವಾಗಿ ಅಭಿವೃದ್ಧಿಮಾಡಿದ ಶ್ರೀವೈಷ್ಣವಾಚಾರ್ಯಾಗ್ರಗಣ್ಯರು. ಇವರು ದಿವ್ಯದೇಶ ಯಾತ್ರೆಮಾಡುತ್ತಿದ್ದಕಾಲದಲ್ಲಿ ತಿರುನಾರಾಯಣಪುರದ (ಮೇಲುಕೋಟೆ) ಕಡೆಯಿಂದ ಬಂದ ಕೆಲವು ಶ್ರೀವೈಷ್ಣವರ ಬಾಯಿಂದ ನಮ್ಮಾಳ್ವಾರರು ರಚಿಸಿದ 'ತಿರುವಾಯ್‌ಮೊಳಿ' ಎಂಬ ಗ್ರಂಥದ ಹತ್ತು ಪಾಶುರಗಳನ್ನು ಕೇಳಿ (ಆರಾವಮುದೇ ಎಂದು ಪ್ರಾರಂಭವಾಗುವ ಪಾಶುರಗಳು) ಅದರ ಕಡೆಯಲ್ಲಿ 'ಓರಾಯಿರತ್ತಿಲ್ ಇಪ್ಪತ್ತುಮ್' (ಒಂದು ಸಾವಿರದಲ್ಲಿ ಈ ಹತ್ತು ಪಾಶುರಗಳು) ಎಂಬ ವಾಕ್ಯವನ್ನು ಕೇಳಿ ಅವರಿಗೆ ಸಾವಿರ ಪಾಶುರಗಳೂ ಬರುತ್ತವೆಯೋ ಎಂದು. ಕೇಳಿದಾಗ, ಈ ಹತ್ತು ಪಾಶುರಗಳನ್ನು ಬಿಟ್ಟರೆ ನಮಗೇನೂ ತಿಳಿಯದು ಎಂದರು. ಮತ್ತೆಲ್ಲೂ ಅದು ಅವರಿಗೆ ಲಭ್ಯವಾಗಲಿಲ್ಲ. ಆಗ ಅವರು ನಮ್ಮಾಳ್ವಾರರು ಅವತರಿಸಿದ ಆಳ್ವಾರ್ ತಿರುನಗರಿಗೆ ಹೋಗಿ ಅಲ್ಲಿ ವಿಚಾರಿಸಿದಾಗ ಆ ಗ್ರಂಥ ಲುಪ್ತವಾಗಿದೆ ಎಂದೂ ಮಧುರಕವಿ ಶಿಷ್ಯ ಪರಂಪರೆಯಲ್ಲಿ ಬಂದ ಪರಾಂಕುಶ ದಾಸರೆಂಬವರಲ್ಲಿ ವಿಚಾರಿಸಿದಾಗ ಅವರಲ್ಲೂ ಸಿಗದೆ ಹೋದಾಗ, ಅವರು

ಶ್ರೀ ವಿ.ಎಸ್. ರಾಮಾನುಜಾಚಾರ್ಯ

ಮಧುರ ಕವಿಗಳು ಅನುಗ್ರಹಿಸಿದ 'ಕಣ್ಣಿನುಣ್ ಶಿರುತ್ತಾಂಬು' ಎಂಬ ಪ್ರಬಂಧವನ್ನು ನಮ್ಮಾಳ್ವಾರ್ ಅರ್ಚಾವಿಗ್ರಹದಮುಂದೆ ಹನ್ನೆರಡು ಸಾವಿರಸಲ ಜಪಮಾಡಿದರೆ ಆಳ್ವಾರರ ಅನುಗ್ರಹವುಂಟಾಗುವುದೆಂದೂ, ತಿಳಿದು ಪರಮ ಭಕ್ತಿಯಿಂದ ಹಾಗೆಯೇ ಜಪಿಸಲು ಆಳ್ವಾರರ ಅಶರೀರವಾಣಿಯಿಂದ ತಿರುವಾಯ್‌ಮೊಳಿ ಮೊದಲಾದ ನಾಲ್ಕು ಸಾವಿರ ಪಾಶುರಗಳನ್ನೂ (ನಾಲಾಯಿರ ದಿವ್ಯ ಪ್ರಬಂಧ) ಹೃದ್ಗತಮಾಡಿಕೊಂಡು ತಮ್ಮ ಶಿಷ್ಯರಿಗೆ ಬೋಧಿಸಿ ಪಾಲಿಸಿಕೊಂಡು ಬರುವಂತೆ ಅನುಜ್ಞೆಮಾಡಿ, ಸಂಸ್ಕೃತವೇದಗಳಿಗೆ ವೇದವ್ಯಾಸರಿನ್ನುವಂತೆ ದ್ರಾವಿಡ ಬ್ರಹ್ಮಸಂಹಿತೆಗೆ ನಾಥಮುನಿಗಳು ಪ್ರವರ್ತಕರಾದರು. ವೇದಾಂತ ದೇಶಿಕರು ತಮ್ಮ ಸಂಪ್ರದಾಯ ಪರಿಶುದ್ಧಿಯಲ್ಲೂ, ಗುರುಪರಂಪರಾಸಾರದಲ್ಲೂ 'ನಾ ಥ ಮು ನಿ ಕಳುಕ್ಕು..........ಯೋಗದಶೈಯಿಲೇಸಾಕ್ಷಾತ್ಕತರಾಯುಂ ನಮ್ಮಾಳ್ವಾರ್ ಆಚಾರ್ಯರಾನಾರ್' ಎಂದು ಪ್ರತಿಪಾದಿಸಿದಂತೆ ಇವರಿಬ್ಬರಿಗೆ ಗುರು ಶಿಷ್ಯ ಸಂಬಂಧವೇರ್ಪಟ್ಟಿದೆ.

## ಯಾಮುನಾಚಾರ್ಯರು-ರಾಮಮಿಶ್ರರು

ಯಾಮುನಾಚಾರ್ಯರು ನಾಥಮುನಿಗಳ ಮೊಮ್ಮಕ್ಕಳು. ಸಾಮಾನ್ಯ ವಿಶೇಷಶಾಸ್ತ್ರ ಪಾರಂಗತರು. ಮಹಾಭಾಷ್ಯ ಭಟ್ಟರೆಂಬ ಶಾಸ್ತ್ರ ಪ್ರವಚನ ಪ್ರವೀಣರಲ್ಲಿ ಅಧ್ಯಯನ ಮಾಡುತ್ತಿದ್ದರು. ಆಕಾಲಕ್ಕೆ ಚೋಳರಾಜನ ಆಸ್ಥಾನಮಹಾವಿದ್ವಾನ್ ಆಕ್ಕಿಯಾಳ್ವಾರ್ ಎಂಬುವನು ಎಲ್ಲ ವಿದ್ವಾಂಸರನ್ನೂ ವಾದದಲ್ಲಿ ಜಯಿಸಿ ಕಪ್ಪಕಟ್ಟಿಸಿಕೊಳ್ಳುತ್ತಿದ್ದ. ಹಾಗಿಯೇ ಅವನ ಸೇವಕರು ಭಟ್ಟರ ಹತ್ತಿರ ಕಪ್ಪವನ್ನು ಕೇಳಲು ಬಂದಾಗ ಭಟ್ಟರ ಹತ್ತಿರ ಹಣವಿಲ್ಲದಿರಲು ಅಲ್ಲಿದ್ದ ಯಾಮುನಾಚಾರ್ಯರು ವಿಷಯವೇನೆಂದು ವಿಚಾರಿಸಿ ತಾವು ಆ ವಿದ್ವಾಂಸನನ್ನು ವಾದದಲ್ಲಿ ಎದುರಿಸಿ ಬರುವೆವೆಂದು ಹೇಳಿ ಕಳುಹಿಸಿ ಒಂದು ಪತ್ರದಲ್ಲಿ 'ಪ್ರತಿವಾದಿವಾರಣ ಪ್ರಕಟಾಟೋಪ ವಿಪಾಟನಕ್ಷಮಾಃ ವಯಂ' (ಪ್ರತಿಪಕ್ಷಿಗಳೆಂಬ ಮತ್ತ ಗಜಗಳ ಮದವನ್ನಡಗಿಸ ಬಲ್ಲ ಸಿಂಹ ತಾವು) ಎಂದು ಬರೆದು ಕಳುಹಿಸಿದರು. ಅಂತಹವರಾರೆಂದು ಕಾಣಲು ಆಕ್ಕಿಯಾಳ್ವಾರ್ ಮತ್ತು ರಾಜರೂ ಅವರನ್ನು ಕರೆತರಲು ಪಲ್ಲಕ್ಕಿ ಕಳುಹಿಸಿದರು. ರಾಜಾಸ್ಥಾನದಲ್ಲಿ ವಾದಕ್ಕೆ ತಯಾರಾದಾಗ, ಆಕ್ಕಿಯಾಳ್ವಾರ್ ಯಾಮುನಾಚಾರ್ಯರನ್ನು ಕಂಡು "ಶಾಸ್ತ್ರಾರ್ಥ ವಾದಕ್ಕೆ ಮುಂಚೆ ಲೌಕಿಕವಾಗಿ ನೀವು ವಾದ ಮಾಡ ಬಹುದೆಂದೂ, ನೀವು ಅಲ್ಲ ಎಂಬುದನ್ನು ಹೌದು ಎಂದೂ, ಹೌದು ಎಂಬುದನು ಅಲ್ಲ ಎಂದೂ ವಾದಮಾಡಿ ಜಯಿಸಬಲ್ಲೆ" ಎಂದಾಗ ತಕ್ಷಣವೇ ಯಾಮುನಾಚಾರ್ಯರು ಮೂರು ಮಾತುಗಳನ್ನು ಮುಂದಿಟ್ಟರು. ಮೊದಲನೆಯದಾಗಿ 'ತ್ವನ್ಮಾತಾ ನ ವಂಧ್ಯಾ' (ನಿನ್ನತಾಯಿ ಬಂಜೆಯಲ್ಲ), ಎರಡನೆಯದಾಗಿ 'ರಾಜಾ ಸಾರ್ವಭೌಮಃ' (ರಾಜನು ಸಾರ್ವಭೌಮನು), ಮೂರನೆಯದಾಗಿ 'ರಾಜಪತ್ನೀ ಪತಿವ್ರತಾ' (ರಾಜನ ಹೆಂಡತಿ ಪತಿವ್ರತೆ)' ಇವುಗಳನ್ನು 'ಅಲ್ಲ' ಎಂದು ಸ್ಥಾಪಿಸಿ ಎಂದಾಗ ಆಕ್ಕಿಯಾಳ್ವಾರ್ ಹಾಗೆ 'ಅಲ್ಲ' ಎಂದು ವಾದ ಮಾಡಿದರಾಗುವ ಪರಿಣಾಮವನ್ನು ನೆನೆದು ಭಯವಿಹ್ವಲರಾಗಿ ಏನೂ ಮಾತನಾಡದೇ ನಿಂತರು, ಆಗ ರಾಜನು, ತನ್ನ ರಾಣಿಗೆ ಮಾತು ಕೊಟ್ಟಿದ್ದಂತೆ, ಗೆದ್ದ ಯಾಮುನಾಚಾರ್ಯರನ್ನು ಒಂದು ಸಂಸ್ಥಾನದ ರಾಜನನ್ನಾಗಿ ಮಾಡಿದರು. ಹೀಗೆ ರಾಜರಾದ ಮೇಲೆ ಯಾಮುನಾಚಾರ್ಯರನ್ನು ಸುಲಭದಲ್ಲಿ ಕಾಣಲು ಸಾಮಾನ್ಯರಿಗೆ ಆಗುತ್ತಿರಲಿಲ್ಲ. ಆ ಸಮಯದಲ್ಲಿ, ನಾಥಮುನಿಗಳ ಶಿಷ್ಯರಾದ ರಾಮಮಿಶ್ರರು ತಮ್ಮ ಗುರುವಿನ ಆಜ್ಞೆಯಂತೆ ಯಾಮುನಾಚಾರ್ಯರಿಗೆ ಸಂಪ್ರದಾಯ ವಿದ್ಯೆಗಳನ್ನು ಕಲಿಸಲು ಬಂದಾಗ ಅವರನ್ನು ಕಾಣದೇ, ಹೇಗೆ ತಮ್ಮ ಆಚಾರ್ಯರ ಆಣತಿಯನ್ನು ಪಾಲಿಸುವುದೆಂದು ಯೋಚಿಸಿ, ಯಾಮುನಾಚಾರ್ಯರ ಇಷ್ಟವೇನೆಂದು ಪರಿವಾರದಲ್ಲಿ ವಿಚಾರಿಸಿದಾಗ ಊಟದಲ್ಲಿ 'ತೂತುಳ್ಳೈ ಕ್ಕೀರೈ' ಎಂಬ ಸೊಪ್ಪಿನಪಲ್ಯ ಅವರಿಗಿಷ್ಟ ಎಂಬುದನ್ನು ತಿಳಿದು, ಪ್ರತಿದಿನವೂ ಬೆಳಗ್ಗೆ ಆ ಸೊಪ್ಪನ್ನು ತಂದು ಅರಮನೆಯ ಪಾಕಶಾಲೆಯಲ್ಲಿ ಕೊಡುತ್ತಾ ಆರು ತಿಂಗಳು ಕಳೆದರು. ಆದರೂ ಯಾಮುನಾಚಾರ್ಯರ ದರ್ಶನ ಸಿಗಲಿಲ್ಲ. ಆಮೇಲೆ ಕೆಲವುದಿನ

(28ನೇ ಪುಟ ನೋಡಿ)

*Statement about ownership and other particulars about*

**SAPTHAGIRI**
**(MONTHLY)**

FORM IV
(*See Rule* 8)

| | | | |
|---|---|---|---|
| 1 | Place of publication | ... | TIRUPATI. |
| 2 | Periodicity of its publication | ... | Monthly |
| 3 | Honorary Editor | ... | Sri S. Lakshminarayana, I.A.S. Executive Officer, T.T.D. |
| 4 | Printer's Name | ... | Sri M. Vijayakumar Reddy, L.P.T., |
| | Whether citizen of India | ... | Yes |
| | Address | ... | Manager, T.T.D. Printing Press, Tirupati. |
| 5 | Editor & Publisher's Name | ... | K. Subba Rao, M.A., |
| | Whether citizen of India | ... | Yes |
| | Address | | Editor, Sapthagiri, T.T.D. Journal, Tirupati. |
| 6 | Names and addresses of individuals who own the Newspaper and partners or shareholders holding more than one per cent of the total capital. | ... ... | Board of Trustees represented by the Executive Officer on behalf of T. T. D., Tirupati. |

*I, K. Subba Rao, hereby declare that the particulars given above are true to the best of my knowledge and belief.*

TIRUPATI,
*Date*: 28-2-1986.

(*Sd.*) **K. SUBBA RAO,**
*Signature of the Publisher.*

## ಶಿವರಾತ್ರಿ ವಿಶೇಷ

ಧಾರ್ಮಿಕ, ಸಾಂಸ್ಕೃತಿಕ, ಸಾಮಾಜಿಕ ಪರಿಸರದ ಹಿನ್ನೆಲೆಯು ಪುಟ್ಟ ಊರಾದ ಮುರ್ಡೇಶ್ವರವು ಉತ್ತರ ಕನ್ನಡದ ಕರಾವಳೀ ತೀರ ಕ್ಷೇತ್ರಗಳಲ್ಲಿ ಅತ್ಯಂತ ಪ್ರಮುಖವೂ, ಚಿತ್ತಾಕರ್ಷಕವೂ ಆದ ಪುಣ್ಯಕ್ಷೇತ್ರಗಳಲ್ಲಿ ಒಂದಾಗಿದೆ. ನಿಸರ್ಗ ಸೌಂದರ್ಯದಿಂದ ಕಂಗೊಳಿಸುವ ಮುರ್ಡೇಶ್ವರ ಕ್ಷೇತ್ರವು ಗೋಕರ್ಣದಿಂದ ನಲವತ್ತು ಮೈಲು ದಕ್ಷಿಣಕ್ಕಿದೆ. ಉತ್ತರ ಕನ್ನಡ ಜಿಲ್ಲೆಯ ಭಟಕಳದಿಂದ 12 ಕಿ. ಮೀ. ದೂರ ಕ್ರಮಿಸಿದಾಗ ವಿವಿಧ ಬಗೆಯ ಶಿಲ್ಪಗಳಿಂದ ಅಲಂಕೃತವಾದ ಸ್ವಾಗತದ್ವಾರಮಂಟಪವೊಂದು ಕಾಣಸಿಗುವುದು. ಈ ಸ್ವಾಗತ ಮಂಟಪವನ್ನು ಹಾದು ಹೊಸದಾಗಿ ನಿರ್ಮಿಸಿದ ಮರಳು ಹಾಸಿದ ದಾರಿಯಲ್ಲಿ ಸುಮಾರು ಒಂದೂವರೆ ಕಿ. ಮೀ. ನಷ್ಟು ನಡೆದರೆ ದೇವಾಲಯವು ಕಾಣಸಿಗುವುದು.

# ಮುರ್ಡೇಶ್ವರ ದೇವಾಲಯ

ರಾವಣನಿಂದ ಎಸೆಯಲ್ಪಟ್ಟ ಶ್ರೇಷ್ಠವಾದ ಪ್ರಾಣಲಿಂಗಕ್ಕೆ ಸುತ್ತಿದ ವಸ್ತ್ರವು ಇಲ್ಲಿಯ ಕಂದುಕ ಪರ್ವತದಲ್ಲಿ ಬಿದ್ದುದರಿಂದ ಅಘೋರಾತ್ಮಕವಾದ ಮೃಡೇಶ್ವರ ಅಥವಾ ಮುರ್ಡೇಶ್ವರನೆಂದು ಪ್ರಸಿದ್ಧವಾದ ಶಿವಲಿಂಗ ಉದ್ಭವವಾಯಿತೆಂಬುದು ಈ ಪ್ರದೇಶದ ಕುರಿತಾದ ಪೌರಾಣಿಕ ಕಥಾನಕ. ಕಂದುಕ ಪರ್ವತವು ಸಮುದ್ರದ ನೀರಿನಲ್ಲಿ ನಡುಗಡ್ಡೆಯಾಗಿದ್ದು ಅರಬ್ಬೀ ಸಮುದ್ರವು ತನ್ನ ಭರತಿಯ ಸಮಯದಲ್ಲಿ ಸುತ್ತಲೂ ನೀರು ತುಂಬಿ ಪ್ರತಿನಿತ್ಯ ಈ ಕ್ಷೇತ್ರದ ಪ್ರದಕ್ಷಿಣೆ ಮಾಡುವಂತೆ ತೋರುವುದು. ಮೃಡ ಎಂದರೆ ಸುಖ ಎಂದರ್ಥ. ಇಲ್ಲಿಯ ಸುತ್ತು ಮುತ್ತಲಿನ ಭೂಮಿಯು ಬಹಳ ಸುಖಕರವಾಗಿದ್ದರಿಂದ ಸ್ಥಳವು ಮುರ್ಡೇಶ್ವರ ಎಂದು ಹೆಸರಾಗಿದೆ. ನಂಬಿಕೆಯಿಂದ ಭಜಿಸುವ ಭಕ್ತಾದಿಗಳನ್ನು ಮುರ್ಡೇಶ್ವರನು ಸುಖವಾಗಿಡುವನು ಎಂಬ ನಂಬಿಕೆ ಜನಜನಿತವಾಗಿದೆ.

ಮೂಲತಃ ಮುರ್ಡೇಶ್ವರದವರೇ ಆಗಿದ್ದು ಈಗ ಹುಬ್ಬಳ್ಳಿಯಲ್ಲಿ ನೆಲೆಸಿರುವ ರಾಜ್ಯದ ಪ್ರಮುಖ ಲೋಕೋಪಯೋಗಿ ಇಲಾಖೆ ಕಾಮಗಾರಿ ಗುತ್ತಿಗೆದಾರರಾದ ಶ್ರೀ ಆರ್. ಎನ್. ಶೆಟ್ಟರ ಸಂಕಲ್ಪ ಬಲದಿಂದ ಮುರ್ಡೇಶ್ವರ ದೇವಾಲಯವು ಹೊಸ ಜನ್ಮ ತಳೆದಿದೆ. ಭಕ್ತ ಬಳಗದವರ ಮುಕ್ತ ಮನಸ್ಸಿನ ನೆರವಿನ ಜೊತೆಗೆ ತಾವೂ ಲಕ್ಷಾಂತರ ರೂಪಾಯಿಗಳನ್ನು ವ್ಯಯಿಸಿ ಸಾಧಾರಣ ಹತ್ತು ವರ್ಷಗಳ ಅವಧಿಯಲ್ಲಿ ಹೆಂಚಿನ ಛಾವಣಿ ಹೊಂದಿದ ದೇವಸ್ಥಾನದ ಕಟ್ಟಡವನ್ನು ಆರ್. ಸಿ. ಸಿ. ಕಟ್ಟಡವಾಗಿ ಪರಿವರ್ತಿಸಿ,ಕನ್ಯಾಕುಮಾರಿಯ ವಿವೇಕಾನಂದ ಸ್ಮಾರಕ ರಚಿಸಿದ ತಮಿಳುನಾಡಿನ ಶ್ರೀ ಎಸ್. ಕೆ. ಆಚಾರ್ಯ ಮತ್ತು ತಂಡದವರನ್ನು ಕರೆಯಿಸಿ ಚಾಲುಕ್ಯ–ಕದಂಬರ ಶಿಲ್ಪಕಲೆಯನ್ನು ಮೇಳೈಸಿ ಇದೀಗ ಭವ್ಯ ದೇವಾಲಯವನ್ನು ನಿರ್ಮಿಸಿದ್ದಾರೆ.


ಆಲಯ ವಿಮಾನ

ನಿಸರ್ಗ ಸೌಂದರ್ಯದಿಂದ ಆಕರ್ಷಣೀಯವಾದ ಈ ಸ್ಥಳದ ಪೂರ್ವಕ್ಕೆ ಸಹ್ಯಾದ್ರಿ ಪರ್ವತಗಳ ಸಾಲು, ತಂಗಾಳಿಗೆ ತಲೆದೂಗುವ ಕಾಂಗು ತೆಂಗಿನ ಮರಗಳ ಹಸಿರು ತೋಟಗಳು, ಸುತ್ತಲೂ ಭೋರ್ಗರೆವ ಸಮುದ್ರ. ಮೇಲೆ ಆಕಾಶದ ನೀಲಿಯಾದರೆ ಕೆಳಗೆ ಸಮುದ್ರದ ನೀಲಿಯಿಂದ ಕೂಡಿದ ಇಲ್ಲಿಯ ಸೌಂದರ್ಯವನ್ನು ಕಣ್ಣಿನಿಂದಲೇ ಕಂಡು ಸವಿಯಬೇಕು. ರಾವಣ ನಿರ್ಮಿತ ಪಂಚಕ್ಷೇತ್ರಗಳಲ್ಲಿ ಇದರ ಸೌಂದರ್ಯ ಮೀರಿಸುವ ಕ್ಷೇತ್ರ ಇನ್ನೊಂದಿಲ್ಲ.

↓ಗೋಪುರ ಕೆತ್ತನೆ



ಚಿತ್ರಲೇಖನ:
ಶ್ರೀ ಎಂ. ಆರ್. ಶಾನುಭಾಗ

ಹಲವಾರು ಆಧುನಿಕ ಪರಿಣತ ಶಿಲ್ಪಿಗಳಿಂದ ಕೆತ್ತಲ್ಪಟ್ಟ ಶಿಲ್ಪ ಕೃತಿಗಳು ಬಹಳ ಆಕರ್ಷಕವಾಗಿವೆ. ಸೂಕ್ಷ್ಮ ಕೆತ್ತನೆಯ ಕುಸುರಿ ಕೆಲಸಗಳು. ದೇವೀ ಹಿನ್ನೆಲೆಯ ಬಿಂಬಾಕೃತಿಗಳು ಗುಡಿಗೋಪುರಗಳಲ್ಲಿ ಪಡಿಮೂಡಿವೆ. ಕ್ಷೇತ್ರದ ಮಹಿಮೆಯನ್ನು ಸಾರುವ ಕಥೆ ವಾಸ್ತುಶಿಲ್ಪದಲ್ಲಿ ಕೆತ್ತಲ್ಪಟ್ಟಿದೆ. ಪುರಾಣ, ರಾಮಾಯಣ, ಮಹಾಭಾರತದ ಹಲವಾರು ಸನ್ನಿವೇಶಗಳ ಕೆತ್ತನೆಯನ್ನು ಇಲ್ಲಿ ಕಾಣಬಹುದು. ಇಲ್ಲಿಯ ಕೃತಿಗಳಲ್ಲಿ ಸ್ತ್ರೀ ಲಾವಣ್ಯ ಮತ್ತು ಹಲವು ನಾಟ್ಯಭಂಗಿಗಳನ್ನು ವಿಶಿಷ್ಟ ಗುಣಮಟ್ಟದ್ದಾಗಿ ಕಾಪಾಡಿಕೊಂಡು ಬರಲಾಗಿದೆ. ದೇವಾಲಯದ ಎದುರಿಗೆ ನಿಜಪ್ರಮಾಣದ ಎರಡು ಶಿಲಾಗಜಗಳು ಸ್ವಾಗತ ಭಂಗಿಯಲ್ಲಿ ನಿಂತಿವೆ. ಮುಖ ಮಂಟಪವು ತುಂಬ ಸುಂದರವಾಗಿ ರಚನೆಗೊಂಡಿದೆ. ದೇವಾಲಯದ ಒಳಬದಿಯಲ್ಲಿ ಗಣಪತಿ, ಪಾರ್ವತಿ ಮತ್ತು ಬಾಗಿಲು ಜಟಕನ ಗುಡಿಗಳು, ಸಾವಿರಾರು ಜನರು ಕುಳಿತುಕೊಳ್ಳುವ ಚಂದ್ರಶಾಲೆ, ದೇವಾಲಯದ ಹೊರ ಆವರಣದಲ್ಲಿ ನವಗ್ರಹ,ಸುಬ್ರಹ್ಮಣ್ಯ,ದತ್ತಾತ್ರೇಯ ಹನುಮಂತ ಮುಂತಾದ ದೇವರ ಗುಡಿಗಳೂ ಇವೆ. ಶ್ರೀ ಆರ್. ಎನ್. ಶೆಟ್ಟಿಯವರು ತಮ್ಮ ತಂದೆಯವರ ಸ್ಮರಣಾರ್ಥ ನಿರ್ಮಿಸಿರುವ ಕಲ್ಯಾಣ ಮಂಟಪವೂ ಇದೆ.

**ಪುರಾಣ ಪ್ರಸಿದ್ಧ:—** ಪುರಾಣ ಪ್ರಸಿದ್ಧವಾದ ಈ ದೇವಾಲಯದ ಸುತ್ತಲೂ ಪವಿತ್ರವಾದ ತೀರ್ಥಗಳಿವೆ. ಸಮುದ್ರದ ನೀರು ಉಪ್ಪು ಎಂದು ಅರಿತ ದೇವತೆಗಳು ದೇವಾಲಯದ ಪೂರ್ವದಿಕ್ಕಿನಲ್ಲಿ ದೇವತೀರ್ಥ ಎಂಬ ಹೆಸರಿನ ಪಾಪನಾಶಕತೀರ್ಥ ರಚಿಸಿದರಂತೆ. ಮುರ್ಡೇಶ್ವರದ ಬಲಭಾಗದಲ್ಲಿ ಅಗ್ನಿತೀರ್ಥ ಎಂಬ ಇನ್ನೊಂದು ತೀರ್ಥವಿದೆ. ಅಮಾವಾಸ್ಯೆ ಮೊದಲಾದ ಪರ್ವಕಾಲದಲ್ಲಿ ಇಲ್ಲಿಗೆ ಬಂದು ತರ್ಪಣ ಕೊಟ್ಟರೆ ಅವರ ಪಿತೃಗಳು ಕೈಲಾಸವನ್ನು ಸೇರುವರೆಂಬ ನಂಬಿಕೆಯಿದೆ. ಭೀಮನು ತಪಸ್ಸಿಗೆ ಕೂತು ರುದ್ರನಿಂದ ತೀರ್ಥ ಪಡೆದುದಕ್ಕೆ ಭೀಮತೀರ್ಥ ಎಂದು ಹೆಸರು. ಈ ಭೀಮತೀರ್ಥದ ಜಲ ಗಂಗಾಜಲದಷ್ಟೇ ಪವಿತ್ರವಾಗಿದೆ. ಕುಂದಗಿರಿಯ ಮೇಲೆ ಇರುವ ಇನ್ನಿತರ ತೀರ್ಥಗಳೆಂದರೆ ರಾಕತೀರ್ಥ, ಜಟಾಯುತೀರ್ಥ, ಕುಂಭತೀರ್ಥ. ದೇವಾಲಯದ ಸ್ವಲ್ಪ ದೂರ ವಿಶಾಲವಾದ ಕೆರೆಯೊಂದಿದ್ದು ವರ್ಷಕ್ಕೆ ಎರಡು ಬಾರಿ ದೇವರ ವಿಹಾರೋತ್ಸವ, ತೆಪ್ಪೋತ್ಸವಗಳು ಇಲ್ಲಿ ನಡೆಯುತ್ತವೆ. ಇಲ್ಲಿಯ ಕಂದುಕ ಪರ್ವತದಲ್ಲಿ ದೊರೆಯುವ ಹಲವಾರು ಔಷಧೀಯ ಗಿಡಮೂಲಿಕೆಗಳು ಅಮೂಲ್ಯವಾದವುಗಳು, ಅಪರೂಪವಾದವುಗಳೂ ಆಗಿರುವವು.

ಸಮುದ್ರ ತಡಿಯಲ್ಲಿ ಮುರ್ಡೇಶ್ವರ



**ಐತಿಹಾಸಿಕ ಮಹತ್ವ:—** ಪೌರಾಣಿಕ ಹಿನ್ನೆಲೆಯ ಜೊತೆಗೆ ಮುರ್ಡೇಶ್ವರವು ಐತಿಹಾಸಿಕ ಮಹತ್ವವನ್ನೂ ಪಡೆದಿದೆ. ಕುಂದಗಿರಿ ಎಂದು ಕರೆಯಲ್ಪಡುತ್ತಿದ್ದ ಈ ದೇವಾಲಯವಿರುವ ಪರ್ವತ ಪ್ರದೇಶವನ್ನು ಕಾಯ್ಕಿಣಿಯ ಜೈನ ದೊರೆಯೊಬ್ಬನು ಆಳುತಿದ್ದನೆಂದು ಹೇಳಲಾಗುತ್ತದೆ. ಈ ದೊರೆಯೇ ಈ ದೇವಾಲಯವನ್ನು ಕಟ್ಟಿಸಿದ್ದನೆಂದೂ ಆಗ ಪ್ರತಿವರ್ಷ ಇಲ್ಲಿ ಜಾತ್ರೆ, ಉತ್ಸವ ನಡೆಯುತ್ತಿದ್ದವೆಂದೂ ನಿರ್ಧರಿಸಲಾಗಿರುವ ಮೂರು ಶಿಲಾಶಾಸನಗಳು ಇತ್ತೀಚೆಗೆ ದೊರೆತಿವೆ. ಅವುಗಳಲ್ಲಿ ಒಂದರಕಾಲ ಕಿ.ಶ. 1448 ಎಂದೂ, ಇನ್ನೊಂದರ ಕಾಲ ಕ್ರಿ.ಶ. 1458 ಎಂದೂ ನಿರ್ಣಯಿಸಲಾಗಿದೆ. ದೇವಾಲಯದ ಪಕ್ಕದಲ್ಲಿದ್ದ ವೀರರ ಸಮಾಧಿಗಳು ಹಿಂದೊಮ್ಮೆ ಇದು ಕದನಭೂಮಿಯಾಗಿತ್ತು ಎಂಬುದಕ್ಕೆ ಸಾಕ್ಷಿ. ಖ್ಯಾತ ಇತಿಹಾಸ ಸಂಶೋಧಕರೊಬ್ಬರು ತಮ್ಮ ಉತ್ತರ ಕನ್ನಡ ಜಿಲ್ಲೆಯ ಶಿಲಾಶಾಸನಗಳು ಎಂಬ ಪುಸ್ತಕದಲ್ಲಿ "ಮುರ್ಡೇಶ್ವರ ದೇವಾಲಯವು ತುಂಬ ಪ್ರಾಚೀನವಾದುದು. ಈ ಪ್ರದೇಶ ಪುಣ್ಯಕ್ಷೇತ್ರ ಎನಿಸಿರುವುದಲ್ಲದೇ ಪ್ರಕೃತಿ ಸೌಂದರ್ಯದ ನೆಲೆವೀಡಾಗಿದೆ; ಉತ್ತಮ ಬಂದರವಾಗಿತ್ತು. ಬ್ರಿಟಿಷರು ಇದರ ಮೂಲಕ ಆಯಾತ ನಿರ್ಯಾತ ನಡೆಸುತ್ತಿದ್ದರು'' ಎಂಬುದಾಗಿ ಬರೆದಿದ್ದಾರೆ. 1800ರ ಸುಮಾರಿಗೆ ಬಂದ ವಿದೇಶಿ ಪ್ರವಾಸಿ ಬುಕೆನನು ಇಲ್ಲಿ ಸುವರ್ಣಕಾರರು, ಕೃಷಿಕರು, ಶಿಲ್ಪಿಗಳು, ಕುಂಬಾರರು ಇದ್ದರೆಂದು ಬಣ್ಣಿಸಿದ್ದಾನೆ.

ಹೀಗೆ ಪೌರಾಣಿಕ ಹಿನ್ನೆಲೆಯನ್ನೂ, ಐತಿಹಾಸಿಕ ಮಹತ್ವವನ್ನೂ ಹೊಂದಿರುವ ಅರಬ್ಬೀ ಸಮುದ್ರದಿಂದ ಸುತ್ತುವರಿದು ಪ್ರಕೃತಿ ಸೌಂದರ್ಯದ ತಾಣವಾಗಿರುವ ಆಸ್ತಿಕರ ಪುಣ್ಯಕ್ಷೇತ್ರವಾಗಿದ್ದ ಮುರ್ಡೇಶ್ವರವು ಈಗ ಉತ್ತಮ ಯಾತ್ರಾ ಸ್ಥಳ ಹಾಗೂ ಪ್ರವಾಸೀ ಕೇಂದ್ರ ಎನಿಸಿಕೊಂಡಿದೆ.



# ಎಡೆಯೂರ ತೋಂಟದ ಸಿದ್ಧಲಿಂಗೇಶ್ವರಸ್ವಾಮಿ

ವೀರಶೈವ ವಾಙ್ಮಯದಲ್ಲಿ ಎಡೆಯೂರು ಸಿದ್ಧಲಿಂಗರು ಮಹೋನ್ನತ ಗೌರವಸ್ಥಾನವನ್ನು ಪಡೆದಿರುತ್ತಾರೆ. ಅವರು ಪರಮ ವೇದಾಂತಹೃದಯರು, ವಚನಕಾರರು, ಅಧ್ಯಾತ್ಮಸಂಪನ್ನರು, ಆತ್ಮತತ್ತ್ವ ಸಿದ್ಧ ಶಿವಯೋಗೀಶ್ವರರು.

ಸಿದ್ಧಲಿಂಗರು ಹರದನಹಳ್ಳಿ ವೀರಶೈವ ಗುರುಸ್ಥಲ ಕುಟುಂಬದಲ್ಲಿ ಜನಿಸಿದರು. ಮಲ್ಲಿಕಾರ್ಜುನ ಮತ್ತು ಜ್ಞಾನಾಂಬೆಯರಿಗೆ ಬಹುಕಾಲ ಸಂತಾನವಿರಲಿಲ್ಲ. ಅವರು ಪ್ರತಿದಿನವೂ ಹರದನಹಳ್ಳಿ 'ಅಮೃತಲಿಂಗೇಶ್ವರ ಸ್ವಾಮಿ'ಯ ದೇವಾಲಯಕ್ಕೆ ಹೋಗಿ ದೇವರನ್ನು ಪೂಜಿಸಿ ಅನನ್ಯ ಭಕ್ತಿಯಿಂದ ಬೇಡುತ್ತಿದ್ದರು. ದೇವರ ಅನುಗ್ರಹದಿಂದ ಜನಿಸಿದ ಆ ಮಗುವಿಗೆ 'ಸಿದ್ಧಲಿಂಗ'ನೆಂದು ನಾಮಕರಣ ಮಾಡಿದರು.

ಅವರು ಮಾತೃಗರ್ಭದಲ್ಲಿದ್ದಾಗಲೆ ಶ್ರೀ ಗುರುವಿನಿಂದ ವಿಭೂತಿಪಟ್ಟವನ್ನು ಪಡೆದು ಲಿಂಗದೀಕ್ಷೆಯನ್ನು ಹೊಂದಿದ್ದರು. ಆ ಬಾಲ ಸಿದ್ಧಲಿಂಗನ ಹೃದಯ ಶಿವಜ್ಞಾನ ಪ್ರಭೆಯಿಂದ ಬೆಳಗಿತು. ಅವರು ವೇದ, ಆಗಮ, ಉಪನಿಷತ್ತುಗಳನ್ನು ಕಲಿತು ಪ್ರವೀಣರಾದರು. ಚಾರ್ವಾಕ, ಜೈನ, ಬೌದ್ಧ, ಅದ್ವೈತ, ದ್ವೈತ, ವಿಶಿಷ್ಟಾದ್ವೈತ ಧರ್ಮಜ್ಞಾನದಲ್ಲಿ ಪಂಡಿತರಾದರು.

ಸಿದ್ಧಲಿಂಗೇಶ್ವರರು ಹದಿನೈದನೆಯ ಶತಮಾನದಲ್ಲಿ ಅನೇಕ ಪವಾಡಗಳನ್ನು ಮಾಡಿದ್ದಾರೆ. ಕನ್ಯಾಕುಮಾರಿಯಿಂದ ಹಿಡಿದು ಹಿಮವತ್ಕೇದಾರದವರೆಗೂ ಸಂಚರಿಸಿದರು.

ಸೌರಾಷ್ಟ್ರ, ಉಜ್ಜಯಿನಿ, ಕಾಶಿ, ದ್ರಾಕ್ಷಾರಾಮ, ತ್ರಯಂಬಕ, ಶ್ರೀಶೈಲ, ಗೋಕರ್ಣ, ಮಹಾಬಲೇಶ್ವರ, ಹಂಪೆ, ಶಿವಗಂಗೆ, ಸಿದ್ಧಗಂಗೆ, ಪೊನ್ನಾಂಬಲ, ಕಾಳಹಸ್ತಿ, ಕಂಚಿ, ಚಿದಂಬರ, ಅರುಣಾಚಲ, ರಾಮೇಶ್ವರ, ಕಗ್ಗೆರೆ, ಎಡೆಯೂರು ಮೊದಲಾದ ಅನೇಕ ಧರ್ಮಕ್ಷೇತ್ರಗಳನ್ನು ಸಂದರ್ಶಿಸಿ ಅಲ್ಲಿನ ಕ್ಷೇತ್ರ ದೇವರುಗಳನ್ನು ಆರಾಧಿಸಿದರು.

ಶ್ರೀಮತಿ ಎಸ್. ಉಮಾ ಆರಾಧ್ಯ

ವಿದ್ಯಾನಗರದಲ್ಲಿ ಸೋಮವಾರ ಬಸಮ್ಮನೆಂಬ ಶರಣೆಯ ಸತ್ಕಾರವನ್ನು ಸ್ವೀಕರಿಸಿ ಅಲ್ಲಿ ಹೋಗಲು ಬಸಮ್ಮನು ಮೂಗಿ ಎಂಬುದನ್ನು ತಿಳಿದು ಅವಳಿಗೆ ಮಾತು ಬರುವಂತೆ ಮಾಡಿ ಗಂಗೆಗಿಂತ ಜಂಗಮ ಪಾದೋದಕವೇ ಶ್ರೇಷ್ಠವೆಂಬುದನ್ನು ಸಿದ್ಧಪಡಿಸಿದರು.

ಸಿದ್ಧಗಂಗೆಯನ್ನು ಹತ್ತಿ ವಂದಿಸಿದವರ ಬಂಧನಗಳನ್ನು ಪರಿಹರಿಸುತ್ತ ಬಂಡಿಹಳ್ಳಿಗೆ ಬಂದರು. ಅಲ್ಲಿ ಲೋಕಕಂಟಕವಾಗಿ ನೆಲೆಸಿದ್ದ ಘೋರ ಸರ್ಪವು ಅವರ ಪಾದಗಳಿಗೆರಗಿ ಅವರಿಗೆ ಹೆಡೆಯೆತ್ತಿ ಕೊಡೆವಿಡಿದು ನಿಂತಿತು. ಸಿದ್ಧಲಿಂಗರು ಅದಕ್ಕೆ ಪಾತಾಳಕ್ಕೆ ಹೋಗಲು ಆಜ್ಞೆಯಿತ್ತರು. ಅದರಂತೆ ಅದು ಪಾತಾಳಕ್ಕೆ ಪ್ರಯಾಣ ಬೆಳೆಸಿತು. ಸಿದ್ಧಲಿಂಗೇಶ್ವರರ ಮಹಿಮೆ ಮಹಿಯಲ್ಲೆಲ್ಲಾ ಹರಡಿತು.

ಒಬ್ಬ ಕುಷ್ಠರೋಗಿಯು ನೀರಿಗಾಗಿ ಹಾಹಾಕಾರ ಮಾಡುತ್ತಿರುವುದನ್ನು ನೋಡಿ ಅರೆಕಲ್ಲು ಬಂಡೆಯಲ್ಲಿ ಪಾದಸ್ಪರ್ಶದಿಂದ ಗಂಗೆಯನ್ನು ಬರಿಸಿ, ಕುಷ್ಠರೋಗವನ್ನು ವಾಸಿಮಾಡಿ ನೀರನ್ನು ಕೊಟ್ಟರಂತೆ. ಅಂದಿನಿಂದ ಆ ಜಾಗಕ್ಕೆ 'ಸಿದ್ಧಗಂಗೆ' ಎಂದು ಹೆಸರಾಗಿದೆ. ಸಿದ್ಧಗಂಗೆ ಅವರ ತಪೋಭೂಮಿಯಾಯಿತು. ಇಂದಿಗೂ ಸಿದ್ಧಗಂಗೆಯೂ ಪುಣ್ಯಕ್ಷೇತ್ರವಾಗಿ, ವಿದ್ಯಾಕ್ಷೇತ್ರ ಹೆಸರಾಗಿದೆ.

ಸಿದ್ಧಗಂಗೆಯಿಂದ ಹೊರಟು ಸಿದ್ಧಲಿಂಗರು ಅಲ್ಲಲ್ಲಿ ಸಂಚರಿಸುತ್ತಿದ್ದಾಗ ನಂಬಿಯಣ್ಣನೆಂಬ ಭಕ್ತನ ಬಿನ್ನಹವನ್ನು ಅಂಗೀಕರಿಸಿ ಕಗ್ಗೆರೆ ಎಂಬ ಗ್ರಾಮಕ್ಕೆ ಬಂದರು. ಆ ಊರು ನಾಗಿಣಿನದಿಯ ತೀರದಲ್ಲಿದೆ. ಅವರು ಆ ಗ್ರಾಮದ ಬಳಿಯ ತೋಟದಲ್ಲಿ ತಂಗಿದರು. ಅಲ್ಲಿ ಪ್ರಶಾಂತವಾತಾವರಣ ಆನಂದದಾಯಕವಾಗಿತ್ತು. ಅಲ್ಲಿಯೇ ಶಿವಪೂಜಾನಿಷ್ಠರಾಗಿ ತಪೋಮಗ್ನರಾದರು. ಅಷ್ಟರಲ್ಲಿ ಬೇಡರದಂಡು ಆ ಊರನ್ನು ಕೊಳ್ಳೆ ಹೊಡೆಯಿತು. ಜನರು ಸಾವು-ನೋವುಗಳಿಂದ ಪರಿತಪಿಸುತ್ತ ಊರುಬಿಟ್ಟು ಹೋದರು. ಸಿದ್ಧಲಿಂಗರು ಆ ತೋಟದಲ್ಲಿಯೇ ಶಿವಯೋಗನಿರತರಾದರು. ಅವರ ಸುತ್ತ ಹುತ್ತ ಬೆಳೆಯಿತು. ಒಂದು ಹೋರಿಯು ಪ್ರತಿದಿನವೂ ಆ ಹುತ್ತಿನ ಮೇಲೆ ನಿಂತು ಆ ಹುತ್ತದ ಬಲಕ್ಕೆ ತಾನಾಗಿಯೇ ಹಾಲು ಸೂಸುತ್ತಿತ್ತು. ಹನ್ನೆರಡು ವರ್ಷ ಕಳೆಯಿತು. ಆ ಹುತ್ತದಿಂದ ಓಂಕಾರ ಧ್ವನಿ ಮೊಳಗುತ್ತಿತ್ತು. ಶಿವಭಕ್ತರು ಕ್ಷೀರಧಾರೆಯನ್ನೆರೆದು ಹುತ್ತವನ್ನು ಕರಗಿಸಿದರು. ಆಗ ದಿವ್ಯತೇಜೋಮೂರ್ತಿ 'ಸಿದ್ಧಲಿಂಗಯತಿವರ್ಯ'ರು ಗೋಚರಿಸಿದರು. ಅಂದಿನಿಂದ ಅವರಿಗೆ 'ತೋಂಟದಾರ್ಯ'ರೆಂದು ಹೆಸರಾಯಿತು. ಅವರನ್ನು ತೋಂಟದ ಸಿದ್ಧಲಿಂಗರೆಂದು ಕರೆಯುತ್ತಾರೆ. ತೋಟದಲ್ಲಿ ಸಿದ್ಧಲಿಂಗೇಶ್ವರರಿಗೆ ತಾನು ಹಿಂದೆ ಮಾಡಿ ಬಂದಿದ್ದ ಬಿನ್ನಹದ ವಿಷಯ ನಂಬಿಯಣ್ಣನಿಗೆ ನೆನಪಾಗಿ ಶಿರಬಾಗಿ ನಮಸ್ಕರಿಸಿ ತನ್ನ ಮನೆಗೆ ಸಿದ್ಧಲಿಂಗೇಶ್ವರರನ್ನು ತರೆದುಕೊಂಡು ಹೋದನು, ಶಿವಾರ್ಚನೆ, ಪಾದಪೂಜೆ ಮಾಡಿದ ಮೇಲೆ ಸಿದ್ಧಲಿಂಗೇಶ್ವರರು ನಂಬಿಯಣ್ಣನನ್ನು ಕರೆದು 'ನೀವೆಲ್ಲಾ ಕಗ್ಗೆರೆ ಬಿಟ್ಟುಹೋಗುವ ಮುನ್ನ ನಮಗಾಗಿ ಮಾಡಿ ಹಗೆಯಲ್ಲಿ ಮುಚ್ಚಿಟ್ಟು ಹೋದ ಶಾಕಪಾಕಗಳನ್ನೇ ತೆಗೆಸು ಅವು ಲಿಂಗಾರ್ಪಿತವಾಗದೆ ಉಳಿಯಬಾರದು' ಎಂದರು. ಅಪ್ಪಣೆಯಂತೆ ತೆಗೆಸಿ ನೋಡಲು ಹನ್ನೆರಡು ವರ್ಷಗಳಿಗೆ ಮೊದಲು

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣ ಕಾಮರಾಗುವುದು ಪರಂಪರೆ.

## ಆಲಯ ಕಾರ್ಯಕ್ರಮ.

| | ಶುಕ್ರವಾರಗಳಲ್ಲಿ | ಇತರ ದಿನಗಳಲ್ಲಿ |
|---|---|---|
| ಸುಪ್ರಭಾತ | ಬೆಳಗ್ಗೆ 4–00 ರಿಂದ 4–30 | ಬೆಳಗ್ಗೆ 5–00 ರಿಂದ 5–30 |
| ಸಹಸ್ರನಾಮಾರ್ಚನೆ | ,, 4–30 ರಿಂದ 5–00 | ,, 5–30 ರಿಂದ 6–00 |
| | (ರೂ 6–50 ಶುಲ್ಕದಿಂದ 4 ಮಂದಿಗೆ ಅನುಮತಿ) | |
| ನಿತ್ಯ ಅರ್ಚನೆ | ಬೆಳಗ್ಗೆ 5–00 ರಿಂದ 5–15 | ಬೆಳಗ್ಗೆ 6–00 ರಿಂದ 6–15 |
| | (ರೂ 150/- ವಾರ್ಷಿಕ ಶುಲ್ಕ ನೀಡಿದ ಗೃಹಸ್ಥರನ್ನು ಅನುಮತಿಸಲಾಗುವುದು) | |
| ಶುದ್ಧಿ, 1ನೇ ಗಂಟೆ | ಬೆಳಗ್ಗೆ 5–15 ರಿಂದ 5–45 | ಬೆಳಗ್ಗೆ 6–15 ರಿಂದ 6–15 |
| ಸರ್ವದರ್ಶನ | ,, 5–45 ರಿಂದ 7–00 | ,, 6–15 ರಿಂದ 1–00 |
| ಸಳ್ಳಿಂಪು | ,, 7–00 ರಿಂದ 7–30 | |
| ಅಭಿಷೇಕ | ,, 9–00 ರಿಂದ 10–00 | |
| | ( ರೂ 100/- ಶುಲ್ಕದಿಂದ ಇಬ್ಬರಿಗೆ ಅನುಮತಿ ) | |
| ಅಲಂಕಾರ 2ನೇ ಗಂಟೆ | 10–00 ರಿಂದ 11–00 | ಮಧ್ಯಾಹ್ನ 1–00 ರಿಂದ 1–30 |
| ಸರ್ವದರ್ಶನ | 11–00 ರಿಂದ ರಾತ್ರಿ 8–00 | 1–30 ರಿಂದ 7–00 |
| ಊಂಜಲ್ ಸೇವೆ (ಮುಕುರ ಮಂಟಪದಲ್ಲಿ) | ರಾತ್ರಿ 7–00 ರಿಂದ 8–00 (ಶುಲ್ಕ ರೂ 150/- ಗೃಹಸ್ಥರಿಗೆ 5 ಗ್ರಾಂಗಳ ಬೆಳ್ಳಿಯ ಪದಕ ಬಹೂಕರಣವಿದೆ) | — |
| ರಾತ್ರಿ ಗಂಟೆ | ರಾತ್ರಿ ?–00 ರಿಂದ 8–30 | ರಾತ್ರಿ 7–00 ರಿಂದ 7–30 |
| ಸರ್ವದರ್ಶನ | — | ,, 7–30 ರಿಂದ 8–30 |
| ಏಕಾಂತಸೇವೆ | ,, 8–30 ರಿಂದ 9–00 | ,, 8–30 ರಿಂದ 9–00 |

ಪೇಷ್ಕಾರ್.

ಇರಿಸಿದ್ದ ಸಾಮಗ್ರಿಗಳೆಲ್ಲ ಹಾಗೆಯೇ ಕೆಡದಂತೆ ಇದ್ದವು.

ಕಗ್ಗೆರೆಯಿಂದ ತುಮಕೂರು ಜಿಲ್ಲೆಯ ಕುಣಿಗಲ್ ತಾಲ್ಲೂಕಿನಲ್ಲಿ ಹರಿಯುವ ನಾಗಿಣೀ ನದಿಯ ತೀರದಲ್ಲಿರುವ ಎಡೆಯೂರು ಬಳಿಗೆ ಬಂದರು. ಎಡೆಯೂರಿನ ಭಕ್ತರ ಬಿನ್ನಹದಂತೆ ಅಲ್ಲಿಯೇ ಉಳಿಯುತ್ತಾರೆ. ಎಡೆಯೂರಿನಲ್ಲಿ ದಿನವೂ ಒಬ್ಬ ಭಕ್ತೆ ಸಿದ್ಧಲಿಂಗೇಶ್ವರರಿಗೆ ಎಡೆಯನ್ನು ತಪ್ಪದೇ ತರುತ್ತಿದುದ್ದರಿಂದ ಅವರು 'ಇದು ಎಡೆಯೂರಾಗಲಿ' ಎಂದು ಹರಸಿದರು. ಅಂದಿನಿಂದ ಪ್ರಕೃತಿ ಸೌಂದರ್ಯದ ಊರಾದ ಎಡೆಯೂರಿನಲ್ಲಿ ಶಿವಯೋಗ ನಿರತರಾದರು.

ಸಿದ್ಧಲಿಂಗೇಶ್ವರರು ಸಂದರ್ಶಿಸಿದ ಪ್ರತಿಯೊಂದು ಕ್ಷೇತ್ರವೂ ಪಾವನವಾಯಿತು. ಅವರು ಮಿಂದ ಪ್ರತಿಯೊಂದು ತೀರ್ಥವೂ ಪವಿತ್ರವಾಯಿತು, ಅವರು ಮೆಟ್ಟಿದ ನೆಲವೆಲ್ಲಾ ಅವಿಮುಕ್ತ ಕ್ಷೇತ್ರವಾಯಿತು. ಅವರು ಅನುಷ್ಠಾನ ಮಾಡಿದ ಸ್ಥಳವೆಲ್ಲಾ ಕೈಲಾಸವಾಯಿತು. ಅವರು ನುಡಿದ ನುಡಿಗಳು ಶಾಸ್ತ್ರ, ವೇದಾಂತಗಳಾದವು. ಅವರು ಮಾಡಿದ ಉಪದೇಶ ಶಿವಗೀತೆಯಾಯಿತು.

ಸಿದ್ಧಲಿಂಗೇಶ್ವರರು ವೀರಶೈವಧರ್ಮದ ಪ್ರಸಾರಕರು ಎನ್ನಿಸಿದ್ದರು. ಅವರಿಗೆ ಎಲ್ಲಾ ಪ್ರಾಂತಗಳವರು, ಎಲ್ಲ ಜನಾಂಗದವರು ಭಕ್ತರಾಗಿದ್ದರು. ಸಾವಿರಾರು ವಿರಕ್ತ ಮಹೇಶ್ವರರುಗಳ ಗುರುಗಳಾಗಿ ಸಂಚರಿಸುತ್ತಾ, ಹೋದ ಕಡೆಯಲೆಲ್ಲಾ ತಮ್ಮ ತಪೋಶಕ್ತಿಯಿಂದ ಭಕ್ತರನ್ನು ಉದ್ಧರಿಸುತ್ತಾ ಎಡೆಯೂರಿನಲ್ಲಿ ನೆಲೆಸಿ ಅಲ್ಲಿಯೇ ಶಿವಯೋಗ ಸಮಾಧಿಹೊಂದಿರುತ್ತಾರೆ. ಇಂದಿಗೂ ಸಿದ್ಧಲಿಂಗೇಶ್ವರರು ತಪೋನಿರತರಾಗಿದ್ದುಕೊಂಡು ತಮ್ಮ ಭಕ್ತಾದಿಗಳನ್ನು ಸಲಹುತ್ತಿದ್ದಾರೆ. ಎಡೆಯೂರು ಪ್ರವಾಸಿಗರನ್ನು ಆಕರ್ಷಿಸಿ ಇಂದಿಗೂ ಮುಖ್ಯಕ್ಷೇತ್ರವಾಗಿದೆ.

ಈ ಕ್ಷೇತ್ರ ಕರ್ನಾಟಕ ರಾಜ್ಯದ ತುಮಕೂರು ಜಿಲ್ಲಾ, ಕುಣಿಗಲ್ ತಾಲ್ಲೋಕ್‌ನಲ್ಲಿದೆ. ಇದು ಬೆಂಗಳೂರಿಗೆ ಸುಮಾರು 65 ಮೈಲಿದೂರದಲ್ಲಿದೆ. ಬಸ್ಸು ಸೌಕರ್ಯ, ಹಾಗೂ ತಂಗಲು ಕೊಠಡಿಗಳು ಇವೆ. ಹೋದ ಭಕ್ತಾದಿಗಳಿಗೆಲ್ಲಾ ದಾಸೋಹದ ವ್ಯವಸ್ಥೆ ಇದೆ. ★

# ಶ್ರೀ ಜಲಕಂಠೇಶ್ವರಸ್ವಾಮಿ ದೇವಾಲಯ

ಕೋಲಾರವು ಕರ್ನಾಟಕದ ಪೂರ್ವಾಂಚಲ ಜಿಲ್ಲೆಯಾಗಿದೆ. ಸ್ವರ್ಣಭೂಮಿಯೆಂಬ ಅಭಿದಾನವನ್ನು ಹೊಂದಿರುವ ಈ ಜಿಲ್ಲೆಯಲ್ಲಿ ಕಲೆ–ಧರ್ಮಗಳ ಸಂಪತ್ತು ಅಡಕವಾಗಿದೆ. ಇಲ್ಲಿರುವ ದೇವಾಲಯಗಳು ಕಲೋಪಾಸನೆ–ದೈವೋಪಾಸನೆಗಳ ಉತ್ತಮ ಮಾಧ್ಯಮಗಳಾಗಿ ಪ್ರಸಿದ್ಧಿ ಪಡೆದಿವೆ. ಪ್ರಕೃತಿ ಸೌಂದರ್ಯದಿಂದ ಕೂಡಿದ ಬೆಟ್ಟ, ನದಿ, ತೊರೆ,ಅರಣ್ಯಗಳ ಪ್ರದೇಶದಲ್ಲಿ ಈ ಜಿಲ್ಲೆಯಲ್ಲಿ ದೇವಾಲಯಗಳು ಕಂಗೊಳಿಸುತ್ತಿವೆ.

ಗಂಗರು ಆಳಿದ ನಾಡು ಕೋಲಾರ. ಚೋಳರು ಆಕ್ರಮಿಸಿದ ಕೋಲಾರ ಪ್ರಾಂತ್ಯದಲ್ಲಿ ಹೊಯ್ಸಳರ, ವಿಜಯನಗರದ ಅರಸರ ಕಲೆಗಾರಿಕೆಯು ಕಣ್ಮನಗಳನ್ನು ಸೆಳೆಯುತ್ತದೆ. ಇದಕ್ಕೆ ನಿದರ್ಶನವೆಂದರೆ ಕೋಲಾರ ಪಟ್ಟಣದಲ್ಲಿರುವ ಸೋಮೇಶ್ವರ ದೇವಾಲಯ. ನಂದಿಯ ಭೋಗನಂದೀಶ್ವರ ದೇವಾಲಯವೂ ಕಲಾಗಾರವಾಗಿ ಪ್ರಸಿದ್ಧವಾಗಿದೆ. ಹೀಗೆ ದೇವಾಲಯಗಳ ಹಿರಿಮೆಯಿಂದ ಕೂಡಿರುವ ಕೋಲಾರ ಜಿಲ್ಲೆಯಲ್ಲಿ ಭಗ್ನ ಅವಶೇಷಗಳಾಗಿರುವ ಪೂಜಾಮಂದಿರಗಳಿಗೇನೂ ಕೊರತೆಯಿಲ್ಲ. ಇಂತಹವುಗಳಲ್ಲಿ ಕೋಲಾರಕ್ಕೆ ಸುಮಾರು ಎರಡು–ಮೂರು ಕಿಲೋಮೀಟರ್‌ಗಳ ದೂರದಲ್ಲಿ, ಶತಶೃಂಗ ಪರ್ವತಗಳ ಮಡಿಲಿನಲ್ಲಿರುವ ಜಲಕಂಠೇಶ್ವರ ಸ್ವಾಮಿಯ ದೇವಾಲಯವೂ ಒಂದಾಗಿರುತ್ತದೆ.

'ಅಂತರಗಂಗೆ' ಯೆಂಬ ಹೆಸರನ್ನು ಹೊಂದಿರುವ, ಜಲ–ತರು–ಪಾಷಾಣಗಳಿಂದ ಕೂಡಿರುವ ಈ ರಮ್ಯವಾದ ಪ್ರದೇಶದಲ್ಲಿ ನೀರುಗಾಲುವೆಯಿಂದ ಸುತ್ತುವರಿದಂತೆ ಮಧ್ಯಭಾಗದಲ್ಲಿ ಸ್ವಲ್ಪ ಎತ್ತರವಾದ ವೇದಿಕೆಯ ಮೇಲೆ ಈ ದೇವಾಲಯವನ್ನು ಕಟ್ಟಲಾಗಿದೆ. ಭದ್ರವಾದ ತಳಹದಿ ಕಲ್ಲುಗಳ ಮೇಲೆ ಕಟ್ಟಿದ್ದ ದೇವಾಲಯವು ಕಾಲಗತಿಯಲ್ಲಿ ಜೀರ್ಣವಾಗಿ ಹೋಗಿದೆ. ದೇವಾಲಯಕ್ಕೆ ಹತ್ತಿಹೋಗಲು ಅನುಕೂಲವಾಗುವಂತೆ ಕಟ್ಟಿರುವ ಮೆಟ್ಟಿಲುಗಳು ಹೂತುಹೋಗಿವೆ. ಸುತ್ತಲೂ ಇದ್ದ ದಪ್ಪ ಕಲ್ಲಿನ ಗೋಡೆಗೆ ಹಾನಿಯುಂಟಾಗಿದೆ. ಕೆಡೆದು ಬಿದ್ದಿರುವ ದೊಡ್ಡದಾದ ಗಾತ್ರದ ಕಲ್ಲುಗಳು ಇದನ್ನು ಕಟ್ಟಿಸಿದವರ ಮನೋದಾರ್ಢ್ಯವನ್ನು ರುಜುವಾತುಗೊಳಿಸುತ್ತವೆ. ಪೂರ್ವದ್ವಾರ–ದಕ್ಷಿಣ ದ್ವಾರಗಳಿಂದ ಜಲಕಂಠೇಶ್ವರ ದೇವಾಲಯವು ಮೂರು ಕೋಣೆಗಳಿಂದ ಕೂಡಿರುವುದು. ಮೊದಲನೆಯ ಕೋಣೆಯು ವಿಶಾಲವಾದದ್ದಾಗಿ ನಾಲ್ಕು ದುಂಡನೆಯ ಕಂಬಗಳನ್ನು ಹೊಂದಿರುವುದು. ಎರಡನೆಯ ಹಾಗೂ ಮಧ್ಯದ ಕೋಣೆಯ ಛಾವಣಿಯ ಮಧ್ಯಭಾಗದಲ್ಲಿ ಬಾಳೆಯ ಮೊಗ್ಗನ್ನು



ಜಲಕಂಠೇಶ್ವರಸ್ವಾಮಿ. ಚಿತ್ರ; 'ಗುರು'

ಇಳಿಬಿಟ್ಟಂತಿರುವ ಕೆತ್ತನೆಯಿದೆ. ಮೂರನೆ ಕೋಣೆ 'ಗರ್ಭಗೃಹ'.

'ಗರ್ಭಗೃಹ'ದ ಹೊರಭಾಗದಲ್ಲಿ ತಳಪಾಯದ ಕಲ್ಲಿನ ಮೇಲೆ ಬಹುಭಾಗವನ್ನು ಶಾಸನಗಳು ಆಕ್ರಮಿಸಿವೆ. ಇವು ತಮಿಳು ಶಾಸನಗಳಾಗಿದ್ದು ಈ ದೇವಾಲಯದ ಇತಿಹಾಸದ ಬಗ್ಗೆ ಬೆಳಕು ಚೆಲ್ಲುತ್ತವೆ.

ಇಲ್ಲಿ ಸುಮಾರು ಐದು ಶಾಸನಗಳಿವೆ. ಇವುಗಳಲ್ಲೊಂದು ಜಲಕಂಠೇಶ್ವರನಿಗೆ ಸಂಬಂಧಪಟ್ಟದ್ದು. ಕ್ರಿ. ಶ. 1216 ರಲ್ಲಿ ಎಂದರೆ ಈಗ್ಗೆ 770 ವರ್ಷಗಳ ಹಿಂದೆ ಉತ್ತಮ ಚೋಳಗಂಗನೆಂಬ ಮತ್ತೊಂದು ಹೆಸರುಳ್ಳ 'ವೀರಗಂಗ'ನೆಂಬುವನು ಈ ದೇವಾಲಯವನ್ನು ಕಟ್ಟಿಸಿರುತ್ತಾನೆ. ಮುಚುಕುಂದಗಿರಿಯ ತಪ್ಪಲಿನಲ್ಲಿ ಗಂಗಮಂಡಲದ ಕುವಳಾಲನಾಡಿನ ಕುವಳಾಲ ನಗರದ ಸಮೀಪವಿರುವ 'ವೀರ ಗಂಗ ನಲ್ಲೂರ್' ಎಂಬ ಗ್ರಾಮದಲ್ಲಿ ಜಲಕಂಠೇಶ್ವರನನ್ನು ತಾನು ಪ್ರತಿಷ್ಠೆ ಮಾಡಿಸಿದ್ದಾಗಿ ಈತನು ಹೇಳಿಕೊಂಡಿರುತ್ತಾನೆ. ಹೀಗೆ ಪ್ರತಿಷ್ಠೆ ಮಾಡಿದ ದೇವರ ಕೈಂಕರ್ಯಗಳಿಗಾಗಿ ಧೂಪ–ದೀಪ–ನೈವೇದ್ಯಗಳಿಗಾಗಿ 'ವಿಭೂತಿಪುರ'ವೆಂಬ – ಕುವಳಾಲ ನಗರಕ್ಕೆ ಹೊಂದಿಕೊಂಡ ಗ್ರಾಮವೊಂದನ್ನು ದತ್ತಿಯಾಗಿ ಬಿಟ್ಟಿರುತ್ತಾನೆ. ಕೀಲುಕೋಟೆಯೆಂದು ಕರೆಸಿಕೊಳ್ಳುತ್ತಿರುವ ಪ್ರದೇಶವೇ ಈ ವಿಭೂತಿಪುರವಾಗಿದ್ದಿರಬೇಕು.

ಸುಮಾರು ಎಂಟುನೂರು ವರ್ಷಗಳ ಕಾಲದ ಹರವನ್ನು ಹೊಂದಿರುವ ಮತ್ತೊಂದು ಶಾಸನದಲ್ಲಿ – ಕಾಲ ಕ್ರಿ. ಶ. 1179 - ಮತ್ತಷ್ಟು ವಿವರಗಳು ಸಿಗುತ್ತವೆ. ವಿಕ್ರಮಾದಿತ್ಯನ ತಂಗಿ ಹಾಗೂ ಗಂಗಪ್ಪೆರು ಮಾಳನ ಸೋದರತ್ತೆಯಾದ, ಶೆಲ್ವನ್ ಎಂಬಾತನ ಮಗಳಾದ ಮಾದೇವಿ ಎಂಬಾಕೆಯು ಒಂದು ಸುಂದರವಾದ ತೋರಣಾಲಂಕೃತ, ಸುತ್ತುಗೋಡೆಗಳಿಂದ ಕೂಡಿದ ಕಲ್ಲಿನ ದೇವಾಲಯವನ್ನು ನಿರ್ಮಿಸಿದಳೆಂದು ತಿಳಿಸುತ್ತದೆ. ಇದು ಜಲಕಂಠೇಶ್ವರನ ದೇವಾಲಯವೇ ಆಗಿದ್ದಲ್ಲಿ ಈ ಆಲಯದ ಕಾಲವು ಮತ್ತಷ್ಟು ಹಿಗ್ಗಬಹುದು. ಆದರೆ ಶಾಸನದಲ್ಲಿ ಇದನ್ನು ಶಂಕರ ಮತ್ತು ಉಮೆಯರ ದೇವಾಲಯವೆಂದು ಹೇಳಲಾಗಿದೆ. ಹೂದೋಟ, ಕೊಳ, ಪಾಕಶಾಲೆ ಸಂಗೀತವಾದ್ಯಗಳ ಸೌಲಭ್ಯವನ್ನು ಈ ದೇವಾಲಯಕ್ಕೆ ನೀಡಿದ್ದಾಗಿ ತಿಳಿದು

ಶ್ರೀ ಕು. ರ. ನರಸಿಂಹನ್

ಬರುತ್ತದೆ. ಬಿಲ್ವವೃಕ್ಷಗಳ ಗುಂಪಿನಲ್ಲಿ, ದೇವರ ಪಾದಗಳಿಗೆ ನದಿಯ ನೀರು ಚಂದನ, ಮುತ್ತು, ರತ್ನ, ಹೊನ್ನನ್ನು ಅರ್ಪಿಸುವಂತೆ ಈ ದೇವರನ್ನು ಪ್ರತಿಷ್ಠೆ ಮಾಡಲಾಗಿದೆ ಯೆಂದು ತಿಳಿದುಬರುತ್ತದೆ.

ಅಂತರಗಂಗೆಯ ಸಮೀಪದಲ್ಲಿರುವ ಜಲ ಕಂಠೇಶ್ವರ ದೇವಾಲಯದ ಹಿಂದೆ ಇಂತಹ ಉಜ್ವಲವಾದ ಧಾರ್ಮಿಕ ಪರಂಪರೆಯಿದೆ. ಇಲ್ಲಿಯವರೆಗೆ ಕಾಲನ ದವಡೆಗೆ ಸಿಕ್ಕಿ ಜೀರ್ಣವಾಗಿದ್ದ ಈ ದೇವಾಲಯವನ್ನು ಇದೀಗ ಸುರಕ್ಷಿತಗೊಳಿಸುವ ಕಾರ್ಯ ಭರ ದಿಂದ ಸಾಗಿದೆ. ದೇವಾಲಯದ ರೂಪ–ವಿನ್ಯಾಸಗಳು ಹೇಗೇ ಇದ್ದರೂ. ಕುವಳಾಲ ನಗರದ ಸಾಂಸ್ಕೃತಿಕ ಪರಂಪರೆ, ವಿಭೂತಿ ಪುರದ ದೈವಿಕಶಕ್ತಿ, ಮುಚುಕುಂದಗಿರಿಯ ಪ್ರಾಕೃತಿಕ ಸಂಪತ್ತು ತನ್ಮೂಲಕವಾಗಿ ಇಡೀ ಶತಶೃಂಗ ಪರ್ವತದ ಮಹೋನ್ನತಿ ಮತ್ತೊಮ್ಮೆ ಈ ನಗರದ ನಾಗರಿಕರ ಪಾಲಿಗೆ ದೊರೆಯುವಂತಾಗುತ್ತಿದೆ.

ಪೂರ್ವೇ ಶ್ರೀ ಸೋಮನಾಥಂ ಚ
ಪಶ್ಚಿಮೇ ಜಾಮದಗ್ನಿಕಂ ।
ಉತ್ತರೇ ವಿಶ್ವನಾಥಂ ಚ
ದಕ್ಷಿಣೇ ಚ ಗಂಗಾಧರಮ್ ॥
ಊರ್ಧ್ವೇ ಶ್ರೀ ಜಲಕಂಠೇಶಂ
ಶತಶೃಂಗಾದಿ ಪರ್ವತೇ ।
ಉಮಾರಮಣಂ ವಂದೇ
ಪಾರ್ವತೀಶಂ ದಯಾನಿಧಿಂ ॥

ಕೋಲಾರ ಜಿಲ್ಲೆಯ ವಿಶೇಷ ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಮುಜರಾಯಿ ಅಧಿಕಾರಿಗಳೂ ಆದ ಶ್ರೀ ಸಿ. ಎನ್. ಸೀತಾರಾಮ್ ಅವರ ನೇತೃತ್ವದಲ್ಲಿ ಶ್ರೀ ಜಲ ಕಂಠೇಶ್ವರಸ್ವಾಮಿ ದೇವಾಲಯ ಜೀರ್ಣೋದ್ಧಾರ ಸಮಿತಿ ಶ್ರೀ ಟಿ. ಪಿ. ಸತ್ಯನಾರಾಯಣ ಮೂರ್ತಿ ಅವರ ಅಧ್ಯಕ್ಷತೆ ಹಾಗೂ ಶ್ರೀ ಎಂ. ಎಂ. ಶ್ರೀನಿವಾಸ ಅವರ ಕಾರ್ಯದರ್ಶಿತ್ವ ದಲ್ಲಿ ಚುರುಕಾಗಿ ಕೆಲಸ ನಿರ್ವಹಿಸುತ್ತ ನಡೆದಿದ್ದು ಇದೇ ಮಾರ್ಚ್ ತಿಂಗಳ 17–3–86 ರಂದು ಶ್ರೀ ಜಲಕಂಠೇಶ್ವರ ಸ್ವಾಮಿಯ ಪುನಃ ಪ್ರತಿಷ್ಠಾ ಕಾರ್ಯ ನಡೆಯಲಿದೆ. ಜೊತೆಗೆ ಇತರ ವಿಗ್ರಹಗಳನ್ನು ಹೊಸದಾಗಿ ಪ್ರತಿಷ್ಠಾಪನೆ ಮಾಡಲು ಭಕ್ತರು ಮುಂದೆ ಬಂದಿದ್ದಾರೆ. ಆ ವಿಗ್ರಹ ಗಳೆಂದರೆ ಮಹಾಗಣಪತಿ, (ಶ್ರೀವಕ್ಕಲೇರಿ ಅಶ್ವತ್ಥನಾರಾಯಣ ಶೆಟ್ಟಿ) ಬಸವಣ್ಣ (ಶ್ರೀ ಕೆ. ಆರ್. ಇರಗಪ್ಪ) ಪಾರ್ವತೀದೇವಿ (ಕೆ. ಸಿ. ವೆಂಕಟವರದಾಚಾರಿ) ಚಂಡಿಕೇಶ್ವರ ಅಶ್ವತ್ಥನಾರಾಯಣ ಶೆಟ್ಟಿ) ಇವುಗಳೊಂದಿಗೇ ನಾಗಪ್ರತಿಷ್ಠೆಯೂ ಆಗುವುದು.

ಕೋಲಾರಜಿಲ್ಲೆಯ ಖ್ಯಾತ ಶಿಲ್ಪಿಗಳ ತವ–ರೂರಾದ ಶಿವಾರಪಟ್ಟಣದಲ್ಲಿನ ಖ್ಯಾತ ಶಿಲ್ಪಿ ಶ್ರೀಧರಾಚಾರ್ಯರಿಂದ ತಯಾರಾಗಿರುವ ಈ ವಿಗ್ರಹಗಳು ಮನಮೋಹಕ ವಾಗಿ ಭಕ್ತಿ ಪ್ರೇರಕವಾಗಿವೆ. ಸ್ವಾಮಿ ಹರಿಹರಾನಂದ ಸರಸ್ವತಿಗಳು ಈ ಎಲ್ಲ ಕಾರ್ಯಗಳ ಹಿಂದೆ ಪ್ರೇರಣಾಮೂಲವಾಗಿ ಕೆಲಸ ಮಾಡುತ್ತಿದ್ದಾರೆ.

ಜಲಕಂಠೇಶ್ವರ ದೇವಾಲಯ ಅಂತರ ಗಂಗೆಯ ತಪ್ಪಲಿನಲ್ಲಿ ವಿಶಾಲವಾದ ಬಯಲಿ ನಲ್ಲಿದ್ದು, ಇಲ್ಲಿಯೇ ಅರಣ್ಯ ಇಲಾಖೆಯ ಜಿಂಕೆಗಳ ಉದ್ಯಾನವನವೊಂದೂ ಇದೆ. ಯಾತ್ರಿಕರು ವಿಶ್ರಮಿಸಲು ವಿಶಾಲವಾದ ಹಿರಿದಾದ ಮರಗಳ ತಂಪು ನೆರಳಿನ ಬಯಲು, ಸಾಮೂಹಿಕ ಭಜನೆ, ಹರಿಕಥೆಗಳಿಗೆ ಅನುಕೂಲವಾಗುವ ಪ್ರಶಾಂತ ವಾತಾವರಣವೂ ಇದ್ದು, ಜಗತ್ತಿನ ಜಂಜಡ ದಿಂದ ದೂರವಾಗುವ ಅವಕಾಶಗಳನ್ನುಂಟು ಮಾಡುವಂತಿದೆ.

# ಕಪಿಲೇಶ್ವರಸ್ವಾಮಿ ದೇವಾಲಯ

## ತಿರುಪತಿ

ತಿರುಪತಿಯಿಂದ ತಿರುಮಲೆಗೆ ಹೊರಡುವ ಹಾದಿಯಲ್ಲಿ ತಿರುಪತಿಯ ಉತ್ತರ ಭಾಗದಲ್ಲಿ ಬೆಟ್ಟದ ತಪ್ಪಲಿನಲ್ಲಿರುವ ಸುಂದರ ಪ್ರಶಾಂತ ದೇವಾಲಯ. ಇಲ್ಲಿನ ದೊಡ್ಡ ಜಲಪಾತ ಮಳೆಗಾಲದಲ್ಲಿ ತುಂಬಿ ಧುಮುಕುವುದು. ಆಳ್ವಾರ್ ತೀರ್ಥ ವೆಂದೂ ಹೆಸರಿರುವ ಇಲ್ಲಿ ಕಪಿಲ ಮಹರ್ಷಿ ಪೂಜಿಸಿದ ಈಶ್ವರ ಲಿಂಗವಿದ್ದು ಸಕಲ ಹಿಂದೂಗಳನ್ನೂ ಏಕತ್ರ ಆಕರ್ಷಿಸುತ್ತದೆ. ತಿರುಪತಿಯಿಂದ ನಡೆದೂ ಹೋಗ ಬಹುದು. ಸ್ಥಳೀಯ ವಾಹನ ಸೌಕರ್ಯವೂ ಉಂಟು.

## ಆಲಯ ಕಾರ್ಯಕ್ರಮ ವಿವರ

| | | |
|---|---|---|
| ಸುಪ್ರಭಾತ | ಬೆಳಗ್ಗೆ | 5–00 ರಿಂದ 5–30 ವರೆಗೆ |
| ಸರ್ವದರ್ಶನ | ,, | 5–30 ರಿಂದ 9–30 ವರೆಗೆ |
| ಅಭಿಷೇಕ | ,, | 9–30 ರಿಂದ 10–30 ವರೆಗೆ |
| ಮೊದಲ ಬಲಿ, ಘಂಟೆ | ,, | 10–30 ರಿಂದ 10–45 ವರೆಗೆ |
| ಸರ್ವದರ್ಶನ | ,, | 10–45 ರಿಂದ 11–30 ವರೆಗೆ |
| ಎರಡನೇ ಬಲಿ, ಘಂಟೆ | ,, | 11–30 ರಿಂದ 11–45 ವರೆಗೆ |
| ಸರ್ವದರ್ಶನ | | 11–45 ರಿಂದ ಮಧ್ಯಾಹ್ನ 4–00 ವರೆಗೆ |
| ಅಭಿಷೇಕ (ಅರ್ಜಿತ) | ಮಧ್ಯಾಹ್ನ | 4–00 ರಿಂದ 4–30 ವರೆಗೆ |
| ಅರ್ಚನೆ (ಅರ್ಜಿತ) | ,, | 4–30 ರಿಂದ 5–30 ವರೆಗೆ |
| ರಾತ್ರಿ ಘಂಟೆ | ಸಂಜೆ | 5–30 ರಿಂದ 5–45 ವರೆಗೆ |
| ಸರ್ವದರ್ಶನ | ,, | 5–45 ರಿಂದ 6–00 ವರೆಗೆ |
| ದೀಪಾರಾಧನೆ | ,, | 6–00 ರಿಂದ 6–30 ವರೆಗೆ |
| ಸರ್ವದರ್ಶನ | ,, | 6–30 ರಿಂದ 7–30 ವರೆಗೆ |
| ಏಕಾಂತಸೇವೆ | ರಾತ್ರಿ | 7–30 ರಿಂದ 8–00 ವರೆಗೆ |

ಅರ್ಜಿತಸೇವಾಕಾಲದಲ್ಲಿ ರೂ ॥ 1–00 ಶುಲ್ಕದಿಂದ ಒಬ್ಬರು ದರ್ಶನಕ್ಕೆ ಅನು ಮತಿಸಲ್ಪಡುವರು.

ಪೇಷ್ಕಾರ್.

# ಶ್ರೀ ಪ್ರಸನ್ನ ಸೋಮೇಶ್ವರ ಸ್ವಾಮಿ

ಭಾರತವು ಪುಣ್ಯಕ್ಷೇತ್ರ ಮತ್ತು ತೀರ್ಥ ಕ್ಷೇತ್ರಗಳಿಗೆ ಪ್ರಸಿದ್ಧಿ ಪಡೆದಿದೆ. ಹಿಮಾಚಲದಿಂದ ಕನ್ಯಾಕುಮಾರಿಯವರೆಗೆ ಅನೇಕ ಪ್ರಸಿದ್ಧ ಪುಣ್ಯಕ್ಷೇತ್ರಗಳು ತುಂಬಿವೆ. ಭಗವದ್ಗೀತೆಯ ಮೊದಲನೆಯ ಶ್ಲೋಕವು ಕ್ಷೇತ್ರ ಮಹಾತ್ಮ್ಯದಿಂದ ಕೂಡಿದೆ. 'ನಿಂದ ನೆಲಕ್ಕು ಒಂದು ಗುಣವಿದೆ' ಎಂದು ಪ್ರಸಿದ್ಧ ಕವಿ ರಾಘವಾಂಕ ಹೇಳಿದ್ದಾನೆ. ಪ್ರಸಿದ್ಧ ಪುಣ್ಯಕ್ಷೇತ್ರಗಳ ಪೈಕಿ ಚಿಕ್ಕಮಗಳೂರು ಜಿಲ್ಲೆಯ ಬಹು ಜಾಗ್ರತ ಸ್ಥಳವೆಂದು ಪ್ರಖ್ಯಾತಿಯಾಗಿರುವ 'ಸೋಮಪುರ' ಕ್ಷೇತ್ರವೂ ಒಂದು. ಇಲ್ಲಿ ಪಶ್ಚಿಮಾಭಿ ಮುಖವಾಗಿರುವ ಶಿವಲಿಂಗದಲ್ಲಿ ದತ್ತಾತ್ರೇಯರನ್ನೊಳಗೊಂಡು (ಬ್ರಹ್ಮ, ವಿಷ್ಣು, ಮಹೇಶ್ವರ) ಅವತರಿಸಿರುತ್ತಾರೆ. ಇದು ಬಹಳ ವಿಶೇಷವಾದ ಸಂಗತಿ.

ಸೋಮಪುರವು ಚಿಕ್ಕಮಗಳೂರು ಜಿಲ್ಲೆಯ ತರೀಕೆರೆ ತಾಲ್ಲೂಕು, ಅಕ್ಕವಳ್ಳಿ ಹೋಬಳಿಗೆ ಸೇರಿದೆ. ಪ್ರಕೃತಿ ಸೌಂದರ್ಯದ ನೆಲೆಬೀಡಾಗಿ ಮೆರೆಯುತ್ತಿರುವ ಮತ್ತು ಅನೇಕ ಪುಣ್ಯಕ್ಷೇತ್ರಗಳಿಗೆ, ಜನನ ಸ್ಥಾನವಾಗಿ ಉನ್ನತ ಪರ್ವತಶ್ರೇಣಿಯಲ್ಲಿರುವ ಪಶ್ಚಿಮ ಘಟ್ಟದ ವರಾಹ ಪರ್ವತದಲ್ಲಿ ಹುಟ್ಟಿ ಶ್ರೀಶೈಲದಲ್ಲಿ ಸಂಗಾಮಿಯಾಗಿ, ಉತ್ತರ ವಾಹಿನಿಯಾಗಿ ಪ್ರವಹಿಸುತ್ತಿರುವ ತುಂಗಭದ್ರಾನದಿಯ ಅಂಗವಾದ 'ಭದ್ರಾನದಿಯ' ಬಲಭಾಗದಲ್ಲಿ ಪಂಚಕ್ಷೇತ್ರಗಳಿವೆ. ಕಳಸ, ಖಾಂಡ್ಯ, ಹೆಬ್ಬೆ, ಸೋಮಪುರ ಮತ್ತು ಕೂಡಲಿ ಇವುಗಳ ಪೈಕಿ ಒಂದಾಗಿ ಬಹಳ ಪ್ರಸಿದ್ಧ ಸ್ಥಳವೇ 'ಸೋಮಪುರ'. ವರಾಹ ಪುರಾಣ ಮತ್ತು ಸ್ಕಂದಪುರಾಣಗಳಲ್ಲಿ, ಈಶ್ವರ – ಷಣ್ಮುಖ ಸಂವಾದದಲ್ಲಿ ತುಂಗಭದ್ರಾ ಮಹಾತ್ಮೆಯನ್ನು ವರ್ಣಿಸುವ ಸಂದರ್ಭದಲ್ಲಿ ಈ ಪುಣ್ಯಕ್ಷೇತ್ರವು ಉಕ್ತವಾಗಿರುವುದರಿಂದ ಈ ಸ್ಥಳವು ಪುರಾಣ ಪ್ರಸಿದ್ಧ ಯಾತ್ರಾಸ್ಥಳವಾಗಿದೆ.

ಭದ್ರಾನದಿಯ ಬಲ ದಂಡೆಯ ಮೇಲೆ ಶಿಲಾಮಯವಾಗಿ, ಬ್ರಹ್ಮ, ವಿಷ್ಣು, ಮಹೇಶ್ವರರಿಂದ ಕೂಡಿದ ದಿವ್ಯ ಜ್ಯೋತಿರ್ಲಿಂಗವೊಂದು ಗರ್ಭಗುಡಿಯಲ್ಲಿ ಕಂಗೊಳಿಸುತ್ತಿದೆ. ಲಿಂಗವು ಕೃಷ್ಣವರ್ಣವಾಗಿದ್ದು ಸುಮಾರು 10 ಅಂಗುಲ ಎತ್ತರವೂ, 15 ಅಂಗುಲ ಸುತ್ತಳತೆಯೂ ಉಳ್ಳದ್ದಾಗಿದೆ. ಈ ಲಿಂಗದ ಮುಂಭಾಗದಲ್ಲಿ ಕೆಳದಿಂದ ಸುಮಾರು 5 ಅಂಗುಲ ಎತ್ತರ, 2 ಅಂಗುಲ ಅಗಲ ಮತ್ತು 1 ಅಂಗುಲ ಆಳ ಉಳ್ಳ ಒಂದುಗೂಡಿನಲ್ಲಿ ತ್ರಿಮೂರ್ತಿಗಳು ವೃಷಭಾರೂಢರಾಗಿ, ಮೂರು ತಲೆಗಳಿಂದಲೂ, ನಾಲ್ಕು ಭುಜಗಳಿಂದಲೂ ಶಂಖ, ಡಮರುಗ, ಜಪಮಾಲೆಗಳಿಂದಲೂ ಅಲಂಕೃತರಾಗಿ ಒಂದೇ ಒಂದು ದೇಹದಲ್ಲಿ ಸುಂದರವಾಗಿ ಆವಿರ್ಭವಿಸಿರುವರು. ಈ ತ್ರಿಮೂರ್ತಿಗಳು ಮೂರ್ತಿವತ್ತಾಗಿ ಒಂದೇ ಲಿಂಗದಲ್ಲಿ ಅವತರಿಸಿರುವ ವೈಶಿಷ್ಟ್ಯದೊಂದಿಗೆ ಶ್ರೀ ಸ್ವಾಮಿಯು ಪಶ್ಚಿಮಾಭಿ ಮುಖವಾಗಿ ನೆಲೆಸಿರುವುದು ಪ್ರಸಂಶನೀಯವಾಗಿದೆ.

ಇವನ್ನು ಪರಶುರಾಮ ಕ್ಷೇತ್ರವೆಂತಲೂ ಕರೆಯುವರು. ಅಲ್ಲದೆ, ಪೂಜ್ಯರಾದ ಜಮದಗ್ನಿ ಮಹರ್ಷಿಗಳು ತಪಸ್ಸುಮಾಡಿದ ಸ್ಥಳವೆಂತಲೂ ಹೆಸರಾಗಿದೆ. 'ತಂದೆಯ ಆಜ್ಞೆಯಂತೆ, ಪರಶುರಾಮನು ತನ್ನ ತಾಯಿಯ ಶಿರಚ್ಛೇದ ಮಾಡಿ, ಮಾತೃಹತ್ಯಾ ದೋಷ ಪರಿಹಾರಾರ್ಥವಾಗಿ, ಅನೇಕ ಪುಣ್ಯ ಕ್ಷೇತ್ರ ಸಂದರ್ಶಿಸಿ, ಅನೇಕ ತೀರ್ಥಕ್ಷೇತ್ರಗಳಲ್ಲಿ ಮಿಂದು ಬರುತ್ತಾ ಕಡೆಗೆ, ಶಿವತೀರ್ಥದಲ್ಲಿ ಸ್ನಾನಮಾಡಿ ತನ್ನ ಪರಶುವನ್ನು ತೊಳೆಯಲಾಗಿ ರಕ್ತ ಹತ್ತಿಕೊಂಡಿದ್ದ ಪಾಪಶೇಷವೂ ಕತ್ತರಿಸಿ ಹೋದುದರಿಂದ, ಇಲ್ಲಿ ತಪಸ್ಸು ಆಚರಿಸುತ್ತಾ ಕುಳಿತುಕೊಳ್ಳುತ್ತಾನೆ. ಅವರ ಘೋರ ತಪಸ್ಸಿಗೆ, ಭಕ್ತಿಗೆ ಮೆಚ್ಚಿ, 'ಸರ್ವಂ ಖಲ್ವಿದಂ ಬ್ರಹ್ಮ' ಎಂಬುದು ಸತ್ಯವೆಂಬುದನ್ನು ಸಾರಿ ಹೇಳಲು ಒಂದೇ ದೇಹದಲ್ಲಿ ತ್ರಿಮೂರ್ತಿಗಳಾದ ಬ್ರಹ್ಮ, ವಿಷ್ಣು, ಮಹೇಶ್ವರರು ಸೇರಿ ಅವತಾರ ಮಾಡಿ ತೋರಿಸುತ್ತಾರೆ. ಪರಶುರಾಮನು ವಿಶ್ವರೂಪವನ್ನು ಕಂಡು ಬಹಳವಾಗಿ ಕೊಂಡಾಡಿ, 'ಹೇ ದೇವದೇವ ಭೂಮ್ಯಾಕಾಶಗಳೆಲ್ಲವೂ ಏಕವಾಗಿ, ಸಹಸ್ರ ಮುಖಗಳಿಂದಲೂ, ಸಹಸ್ರ ಪಾದಗಳಿಂದಲೂ ಸಹಸ್ರಾಕ್ಷಿಗಳಿಂದಲೂ ಸಹಸ್ರಾಯುಧಗಳಿಂದಲೂ ವಿರಾಜಮಾನವಾಗಿ ಕಂಗೊಳಿಸುತ್ತಿರುವ ನಿನಗೆ ನಮಸ್ಕಾರವು. ಹೇ ದೇವಾ ಪ್ರಪಂಚಾದಿ ನಿನ್ನೀ ಸೃಷ್ಟಿಯಲ್ಲಿ ಎಲ್ಲವೂ ಒಂದೇ ಆದರೂ, ಭಿನ್ನ ಭಿನ್ನವಾಗಿ ತೋರುತ್ತಿರುವ ನಿನ್ನ ಲೀಲಾಮಾಯೆಯಲ್ಲಿ ಸಿಕ್ಕಿ ದಾರಿಗಾಣದಿರುವ ಮನುಷ್ಯರಿಗೆ ದುಸ್ಸಾಧ್ಯವಾದ ನಿನ್ನ ನೆಲೆಯನ್ನು ತಿಳಿಯಲು ಸ್ವಲ್ಪವಾದರೂ ಅನುಕೂಲವಾಗುವಂತೆ ಸೂಕ್ಷ್ಮರೂಪಿನಿಂದ ನೋಡಲು ಅವಕಾಶವಾಗುವಂತೆ ಶಿಲಾಮಯ ಸೌಮ್ಯಾಕಾರನಾಗಿ ಆಗಲು ಪ್ರಾರ್ಥಿಸುತ್ತೇನೆ' ಎಂಬುದಾಗಿ ದೈನ್ಯದಿಂದ ಬೇಡಿಕೊಳ್ಳಲು 'ತಥಾಸ್ತು' ಎಂಬ ಶಬ್ದವು ದಿಗಂತವನ್ನು ತಲುಪಿ, ನಾದಬ್ರಹ್ಮನಲ್ಲಿ ಲೀನವಾಯಿತು. ಆ ಮರುಕ್ಷಣದಂದಲೇ ಸೌಮ್ಯರೂಪಿನಿಂದ ಸೋಮೇಶ್ವರನೆಂಬ ಲಿಂಗವು ಉದ್ಭವಿಸಿತು. ಅಂದಿನಿಂದ ಆತನನ್ನು ಭಕ್ತಿಯಿಂದ ಪರಶುರಾಮನು ಪೂಜಿಸುತ್ತಿದ್ದನು.

ಕೃತಯುಗದ ಅಂತ್ಯ ಭಾಗದಲ್ಲಿ 'ಸುವರ್ಣ ಸ್ಯಂದನ' ಎಂಬ ಮಗಧ ದೇಶದ ರಾಜನಿಗೂ, ನೆರೆ ರಾಜ್ಯವಾದ ಪಾಂಚಾಲ ದೇಶದ ದೊರೆಯಾದ 'ಕಾನಿನ' ಎಂಬ ದೊರೆಗೂ ಉಂಟಾಗಿದ್ದ ಮನಸ್ಸಿನ ಕಲ್ಮಷವಾದ ಪಾಷಾಣತ್ವವನ್ನು, ಅಂದರೆ ಶಿವ ದೊಡ್ಡವನೇ? ವಿಷ್ಣು ದೊಡ್ಡವನೇ? ಎಂಬುದನ್ನು ಪರಿಹರಿಸಲೋಸ್ಕರವಾಗಿ ಪರಶುರಾಮನ ಅಪೇಕ್ಷೆಯಂತೆ ಸ್ವಾಮಿಯು 'ಶಿವಾಯ ವಿಷ್ಣುರೂಪಾಯ ಶಿವರೂಪಾಯ ವಿಷ್ಣವೇ' ಎಂಬಂತೆ 'ದೇವರು ಒಬ್ಬನೇ' ಎಂಬುದನ್ನು ಪ್ರಪಂಚಕ್ಕೆ ನಿದರ್ಶನವಾಗಿ ತೋರಿಸಿ, ತನ್ಮೂಲಕ ನಮ್ಮಲ್ಲಿರುವ ಮತ

**ಶ್ರೀ ಷಣ್ಮುಖಾಚಾರ್ಯ**

ದ್ವೇಷವನ್ನು ಬಿಟ್ಟು 'ಸರ್ವಂ ಖಲ್ವಿದಂ ಬ್ರಹ್ಮ' ಎಂಬುದು ಸತ್ಯವೆಂಬುದನ್ನು ಸಾರಿ ಹೇಳಲು ಒಂದೇ ದೇಹದಲ್ಲಿ ತ್ರಿಮೂರ್ತಿಗಳು ಸೇರಿರುವುದನ್ನು ಅವತಾರ ಮಾಡಿ ತೋರಿಸಿರುತ್ತಾನೆ. ಅಲ್ಲದೆ ಪರಶುರಾಮನು ತಪಸ್ಸು ಮಾಡಿದಾಗ ಅಲ್ಲಿ ಉದ್ಭವಿಸಿದ ಶಿವಲಿಂಗದ ಕಥೆಯನ್ನು ವಿಸ್ತಾರವಾಗಿ ಹೇಳಿದಮೇಲೆ, ಹರಿಹರರಲ್ಲಿ ಭೇದವನ್ನು ಕಲ್ಪಿಸಿ ನರಕಭಾಜನರಾಗಿದ್ದ ಪೂರ್ವೋಕ್ತ ರಾಜರುಗಳಾದ 'ಸುವರ್ಣ ಸ್ಯಂದನ ಮತ್ತು ಕಾನಿನ' ಎಂಬುವರು ವಿಶ್ವರೂಪದ ಸಾರವಾದ, ತ್ರಿಮೂರ್ತ್ಯಾತ್ಮಕ ಶ್ರೀ ಪ್ರಸನ್ನ ಸೋಮೇಶ್ವರಸ್ವಾಮಿಯವರ ದಿವ್ಯ ದರ್ಶನ ಮಾಡಿ, ಮನಸ್ಸಿನಲ್ಲಿ ಅಂಟಿಕೊಂಡಿದ್ದ ಶಂಕೆಯನ್ನು ಬಿಟ್ಟು ಪಶ್ಚಾತ್ತಾಪದಿಂದ ಸ್ವಾಮಿಗೆ ಭಕ್ತಿಯಿಂದ ಶರಣುಬಂದರು. ಪಶ್ಚಾತಾಪದಿಂದಲೂ, ಅನನ್ಯ ಭಕ್ತಿಯಿಂದ ಮೊರೆಹೊಕ್ಕದ್ದರಿಂದ ಕರುಣಾಮಯನಾದ ಭಗವಂತನು ಇವರನ್ನು ಪಾಪಮುಕ್ತರನ್ನಾಗಿ ಮಾಡಿ ಶಾಶ್ವತ ಪದವಿಯನ್ನು ಅನುಗ್ರಹಿಸಿ ಚರಿತಾರ್ಥರಾಗುವಂತೆ ಮಾಡಿದನು.

ಬಹು ಸನಾತನವಾದ ಈ ಪುಣ್ಯಕ್ಷೇತ್ರ ಅನೇಕಭಾರಿ ಜೀರ್ಣೋದ್ಧಾರವಾಗಿ ಈಗ ಇರುವ ದೇವಸ್ಥಾನ ಕ್ರಿ. ಶ. 12ನೇ ಶತಮಾನ ಮಧ್ಯಭಾಗದಲ್ಲಿ 'ಪ್ರತಾಪ ರುದ್ರ ಚಕ್ರವರ್ತಿ' ಎಂಬ ರಾಜನ ಕಾಲದಲ್ಲಿ ಪುನರುದ್ಧಾರವಾಗಿ ಕಟ್ಟಿಸಿದ್ದಾಗಿರುತ್ತದೆಂಬುದು ಶಾಸನಗಳಿಂದ ತಿಳಿದು ಬರುತ್ತದೆ.

ಈ ಕ್ಷೇತ್ರವು, ಬಿದನೂರು ಶಿವಪ್ಪ ನಾಯಕರಂತಹ ಅನೇಕ ಭಕ್ತಾಗ್ರಣಿಗಳ ಆಳ್ವಿಕೆಯಲ್ಲಿದ್ದು ಬಹಳ ವೈಭವದಿಂದ ಮೆರೆಯುತ್ತಿತ್ತು. ಈ ದೇವಾಲಯವು ತನ್ನ ಪ್ರತಿಭೆಯಿಂದ ಅನೇಕ ಇನಾಮುಗಳನ್ನು ದಾನ ದತ್ತಿಗಳನ್ನು ಶಾಶ್ವತವಾಗಿ ಪಡೆದಿದೆ. ನಂತರ ಮೈಸೂರು ರಾಜರ ಆಳ್ವಿಕೆಗೆ ಬಂದು ಕ್ರಮೇಣ ಅನೇಕ ಯಾತ್ರಿಕರನ್ನು ಆಕರ್ಷಿಸಿದೆಯಲ್ಲದೆ, ಸಹಸ್ರಾರುಮಂದಿ ಸ್ವಾಮಿಯ ಕೃಪೆಗೆ ಪಾತ್ರರಾಗಿದ್ದಾರೆ. ಇಲ್ಲಿ ಪ್ರತೀವರ್ಷ ಜಾತ್ರೆ ನಡೆಯುತ್ತದೆ.

ಈ ಕ್ಷೇತ್ರ, ತರೀಕೆರೆಯಿಂದ ಶೃಂಗೇರಿಗೆ ಹೋಗುವ ಕಿರುದಾರಿಯಲ್ಲಿ 1 ಮೈಲಿ 2 ಫರ್ಲಾಂಗ್ ದೂರದಲ್ಲಿದೆ.

ಶಿವಮೊಗ್ಗಾ ನಗರದಿಂದ 20 ಮೈಲಿ ದೂರ ಆಗ್ನೇಯ ದಿಕ್ಕಿಗೆ ಹೋಗುವ ಬಸ್ಸಿನ ಮುಖಾಂತರ ಬಂದುಹೋಗಲು ಸೌಕರ್ಯವಿದೆ. ದೇಶದ ಒಂದು ಪ್ರಮುಖ ಕೈಗಾರಿಕಾ ಕೇಂದ್ರವಾಗಿರುವ ಭದ್ರಾವತಿಯಿಂದ ದಕ್ಷಿಣಕ್ಕೆ ಸುಮಾರು 10 ಮೈಲಿ ದೂರದಲ್ಲಿದೆ.

★

# ತ್ಯಾಗರಾಜರು ಚಿತ್ರಿಸಿದ ಶ್ರೀತುಲಸೀದೇವಿ

ದೇವರ ನಾಮಗಳನ್ನು ಹಾಡಿದ ಪುರಂದರ ಾಸರು, ಕೃತಿಗಳನ್ನು ಹಾಡಿದ ತ್ಯಾಗರಾಜರು ಕ್ಷಿಣ ಭಾರತದೇಶದಲ್ಲಿ ಪ್ರಸಿದ್ಧರಾದ ಕೀರ್ತನ ಾರರು. ಇವರ ಕೀರ್ತನೆಗಳಲ್ಲಿ ಸಾಮ್ಯಗಳು ೆಚ್ಚು. ತ್ಯಾಗರಾಜರ ತಾಯಿ ಸೀತಮ್ಮ. ಆ ಾಧ್ವಿಗೆ ಪುರಂದರದಾಸರ ಪದಗಳೆಂದರೆ ಪ್ರಾಣ. ಾಯಿ ದಾಸರ ಪದಗಳನ್ನು ಹಾಡುತ್ತಿದ್ದಳು. ದ್ದರಿಂದ ತ್ಯಾಗರಾಜರ ಸಂಕೀರ್ತನೆಗಳಲ್ಲಿ ಾಸರ ಪ್ರಭಾವ ಕಾಣುತ್ತದೆ. ಅವುಗಳಲ್ಲಿ ುಲಸೀಕೀರ್ತನೆಗಳು ಪ್ರಧಾನವಾದವು.

ತುಲಸೀದೇವಿ ವೃತ್ತಾಂತವು ಶಿವಪುರಾಣ ುತ್ತು ದೇವೀ ಭಾಗವತದಲ್ಲಿ ವಿಸ್ತಾರವಾಗಿದೆ. ುಲಸೀದೇವಿ ಬದರಿಕಾವನದಲ್ಲಿ ತಪಸ್ಸು ಮಾಡಿ ಳು. ತುಲಸಿಗಾಗಿ ಶಂಖಚೂಡನು ತಪಸ್ಸು ಾಡಿದನು. ತುಲಸಿ ತಪವು ಶಂಖಚೂಡನ ತಪ ್ಕಿಂತಲೂ ಹೆಚ್ಚಲ್ಲ. ಆದ್ದರಿಂದ ತುಲಸಿ ಶಂಖ ೂಡನ ಸತಿಯಾದಳು. ಆಮೇಲೆ ವಿಷ್ಣುಪ್ರಿಯ ಾದಳು. ಗೋಲೋಕದಲ್ಲಿ ವಿರಜಾತೀರದಲ್ಲಿ ುಲಸಿ ವಾಸಮಾಡುತ್ತಾಳೆ,

'ಸಾಲಗ್ರಾಮಶಾಸ್ತ್ರ'ದಲ್ಲಿ ತುಲಸೀಮಹಾ ್ಮ್ಯವು ಕಾಣುತ್ತದೆ. ಎಲ್ಲಿ ತುಲಸಿ ಇರುತ್ತದೋ ಲ್ಲಿ ದೇವತೆಗಳು ಇರುತ್ತಾರೆ. ತುಲಸಿ ಹಾಕಿದ ೀರಿನಲ್ಲಿ ಸ್ನಾನ ಮಾಡಿದರೆ ಯಜ್ಞಫಲವು ಸಿಕ್ಕು ್ತದೆ. ಸಹಸ್ರ ಅಮೃತ ಕಳಶ ಸ್ನಾನವು ುಲಸೀ ಸ್ನಾನಕ್ಕಿಂತ ಕಡಮೆ. ತುಲಸೀ ಜಲ ್ನಾನ ಮಾಡಿದರೆ ಸಕಲ ಪಾಪಗಳು ಹೋಗು ್ತವೆ. ತುಲಸೀಮಾಲಾಧಾರಿಗೆ ಅಶ್ವಮೇಧಫಲವು ಸಿಕ್ಕುತ್ತದೆ.

ಪುರಂದರದಾಸರ ತುಲಸೀ ಪದಗಳಲ್ಲಿ 'ಕಲ್ಯಾಣಂ ತುಲಸೀ ಕಲ್ಯಾಣಂ', 'ಎಲ್ಲಿ ಶ್ರೀತುಲ ಯ ವನವು', 'ವೃಂದಾವನವೆ ಮಂದಿರವಾಗಿಹ, ವೃಂದಾವನದೇವಿ ನಮೋನಮೋ' – ಕೀರ್ತನೆ ಳು ಪ್ರಸಿದ್ಧವಾದವು. ಅದೇರೀತಿಯಲಿ ತ್ಯಾಗ ರಾಜರ ಕೃತಿಗಳಲ್ಲಿ 'ತುಲಸೀದಳಮುಲಚೇ' ದೇವಿ ಶ್ರೀತುಲಸಮ್ಮ,' ತುಲಸೀ ಜಗಜ್ಜನನಿ,' ತುಲಸಮ್ಮ ಮಾಯಿಂಟ', ಅಮ್ಮ ರಾವಮ್ಮ', ತುಲಸಿ ಬಿಲ್ವದಳ–ಕೀರ್ತನೆಗಳು ಪ್ರಸಿದ್ಧವಾದವು.

ಉತ್ಥಾನ ದ್ವಾದಶಿ ಕಾಲದಲ್ಲಿ ತುಲಸಿಗೆ ಪ್ರತ್ಯೇಕ ಪೂಜೆಮಾಡುವುದು ಸಂಪ್ರದಾಯ್ಯಾ ಈ ಸಂಪ್ರದಾಯವನ್ನು ದಾಸರು 'ಕಲ್ಯಾಣಂ ತುಲಸೀ ಕಲ್ಯಾಣಂ' ಕೀರ್ತನೆಯಲ್ಲಿ ಹೊಗಳಿ ದ್ದಾರೆ.

ಅಂಗಳದೊಳಗೆಲ್ಲ ತುಲಸಿಯ ವನಮಾಡಿ
ಸಿಂಗಾರವ ಮಾಡಿ ಶೀಘ್ರದಿಂದ
ಕಂಗಳ ಪಾಪವ ಪರಿಹರಿಸುವ ಮುದ್ದು
ರಂಗ ಬಂದಲ್ಲಿ ಈ ನೆಲಸಿದನು

ಲಕ್ಷಬತ್ತಿಯ ದೀಪ ಹಚ್ಚಿ ನೈವೇದ್ಯಗಳನಿಟ್ಟು ಪೂಜಿಸುವರಿಗೆ ಮೋಕ್ಷವನ್ನು ತುಲಸಿ ಕೊಡುತಿಹಳು. ತ್ಯಾಗರಾಜರ ಕೃತಿಗಳಲ್ಲಿ ತುಲಸೀ ಕಲ್ಯಾಣ ಪ್ರಸ್ತಾವನೆ ಯಿಲ್ಲ. ಆದರೆ,

ತುಲಶಮ್ಮ ಮಾಯಿಂಟ ನೆಲಕೊನವಮ್ಮ ಶ್ರೀ
ಈ ಮಹಿನಿ ನೀಸಮಾನಮೆವರಮ್ಮ
–ಬಂಗಾರು ಬೊಮ್ಮ

ಕೀರ್ತನೆಯಲ್ಲಿ ವಿವಾಹ ವೇಷವು ವರ್ಣಿತವಾಗಿದೆ.

ಪೂಜೆಗೆ ಪುಷ್ಪಗಳು ಪ್ರಧಾನವು. ಆದರೆ ತುಲಸಿ ಯಿದ್ದರೆ ಪುಷ್ಪಗಳು ಬೇಕಾಗಿಲ್ಲ. ತ್ಯಾಗರಾಜ ಸ್ವಾಮಿ ಶಿಷ್ಯರಲ್ಲಿ ವಾಲಾಜಪೇಟೆ ವೆಂಕಟರಮಣ ಭಾಗವತರ್ ಒಬ್ಬರು. ಅವರು ತ್ಯಾಗರಾಜ ಸ್ವಾಮಿಗೆ ಶಿಷ್ಯರಾಗುವುದಕ್ಕೆ ಒಂದು ಕಥೆ ಉಂಟು. ಭಾಗವತರ್ ಅವರು ಅಯ್ಯಂಪೇಟೆಯಲ್ಲಿ ಇದ್ದರು. ಅನುದಿನವು ತಿರುವೈಯಾರ್ ಹೋಗಿ ತ್ಯಾಗರಾಜರ ಭಜನೆಗಳಲ್ಲಿ ಸೇರುತ್ತಿದ್ದರು. ತಮ್ಮ ಕೈಂಕರ್ಯವಾಗಿ ತುಲಸಿಯನ್ನು ಶಿಷ್ಯರಿಗೆ ಅರ್ಪಿಸುತ್ತಿದ್ದರು. ಒಂದು ದಿನ ಭಾಗವತರ್ ಅವರಿಗೆ ಆರೋಗ್ಯ ಸರಿಯಿಲ್ಲ. ಆದ್ದರಿಂದ ತುಲಸಿ ಅರ್ಪಿಸಲಿಲ್ಲ. ಆ ದಿನವೇ ಪೂಜೆಗೆ ತುಲಸಿ ಕಡಿಮೆ ಆಗಿತ್ತು. ತ್ಯಾಗರಾಜರು ಕಾರಣ ಕೇಳಿದರು. ಶಿಷ್ಯರು ಭಾಗವತರ್ ಕೈಂಕರ್ಯವನ್ನು ಹೇಳಿದರು. ತ್ಯಾಗರಾಜರಿಗೆ ಭಾಗವತರ್ ಮೇಲೆ ಕಾರಣ ವಿಲ್ಲದ ವಾತ್ಸಲ್ಯ ಉಂಟಾಯಿತು. ಅವರನ್ನು ಶಿಷ್ಯನಾಗಿ ಸ್ವೀಕರಿಸಿದರು. ಆ ಸಂದರ್ಭದಲ್ಲಿ ತ್ಯಾಗರಾಜಸ್ವಾಮಿಯವರು-

ತುಲಸೀದಳಮುಲಚೇ ಸಂತೋಷಮುಗಾ
ಪೂಜಿಂತು
ಪಲುಮಾರು ಚಿರಕಾಲಮು ಪರಮಾತ್ಮುನಿ
ಪಾದಮುಲಕು

–ಎಂದು ಹಾಡಿದರು.



ತುಲಸಿ ಮಹಿಮೆಯನ್ನು ಕುರಿತು ಪುರಂದರ ದಾಸರೂ ತ್ಯಾಗರಾಜರೂ ಹಾಡಿದ್ದಾರೆ. ಈ ಮಹಿಮೆ ಎರಡು ಬಗೆಯಾಗಿದೆ. ದೇವತಾಧಿಕ್ಯ ವನ್ನು ಹೇಳುವುದು ಒಂದು ರೀತಿ. ಸೇವಾಭಾಗ್ಯ ವನ್ನು ಹೊಗಳುವುದು ಮತ್ತೊಂದು ಬಗೆ.

ಪುರಂದರದಾಸರು ತುಲಸಿ ದೇವತಾಧಿಕ್ಯವನ್ನು 'ವೃಂದಾವನವೆ ಮಂದಿರವಾಗಿಹ' ಕೀರ್ತನೆಯಲ್ಲಿ ಸ್ಪಷ್ಟಪಡಿಸಿದ್ದಾರೆ. 'ನಮ್ಮ ನಂದನ ಮುಕುಂದಗೆ ಪ್ರಿಯವಾದ ಚೆಂದಾದ ಶ್ರೀತುಲಸಿ' ಎಂದು ಹಾಡಿದ್ದಾರೆ. ತುಲಸಿಯನ್ನು ದೇವರು ಮೆಚ್ಚುವುದಕ್ಕೆ ಕಾರಣವನ್ನು ತ್ಯಾಗರಾಜರು 'ಅಮ್ಮ ರಾವಮ್ಮ ತುಲಸಮ್ಮ' ಕೀರ್ತನೆಯಲ್ಲಿ ಹೇಳಿದ್ದಾರೆ. ಲೋಕದಲ್ಲಿ ಆಕರ್ಷಣೆಗೆ ಸಾಧಾರಣವಾಗಿ ರೂಪ, ಆ ಮೇಲೆ ಗುಣ ಆಮೇಲೆ ಅಂತಸ್ತು ಕಾರಣವಾಗುತ್ತವೆ. ರೂಪವತಿ, ಗುಣವತಿ, ಯರಿಗೆ ಪತಿ ಪ್ರೇಮ ಸುಲಭ. ತುಲಸಿಗೆ ರೂಪ ಉಂಟು. ಪರಿಮಳ ಉಂಟು. ಮಹಾತ್ಮ್ಯ ಉಂಟು. ಆದ್ದರಿಂದ ತ್ಯಾಗರಾಜನ ಸ್ನೇಹಿತನಾದ ವಿಷ್ಣುವು ತುಲಸಿಯನ್ನು ಸ್ವೀಕರಿಸಿದ್ದಾನೆಂದು ತ್ಯಾಗ ರಾಜರು ಕಾರಣ ಹೇಳುತ್ತಾರೆ.

ನೀಮ್ಮದು ತನುವುನು ಗನಿ ನೀ
ಪರಿಮಳಮುನು ಗನಿ
ನೀ ಮಹಾತ್ಮ್ಯಮುನು ಗನಿ ನೀರಜಾಕ್ಷಿ
ತಾಮರಸದಳ ನೇತ್ರುಡು ತ್ಯಾಗರಾಜುನಿ
ಮಿತ್ರುಡು
ಪ್ರೇಮತೋ ಶಿರಮುನನು ಬೆಟ್ಟುಕೊನ್ನಾಡಟ

ಡಾ॥ ಕೆ. ಸರ್ವೋತ್ತಮರಾವ್

ತುಲಸೀವನ ಮಹಾತ್ಮ್ಯವನ್ನು ಇಬ್ಬರೂ ಹೇಳಿದ್ದಾರೆ. 'ಎಲ್ಲಿ ಶ್ರೀತುಲಸಿಯ ವನವು ಅಲ್ಲಿ ಒಪ್ಪುವರು ಸಿರಿನಾರಾಯಣರು ಸರಸಿಜಭವ ಸುರಪ ಪಾವಕ ಚಂದಿರ ಸೂರ್ಯ ಮೊದಲಾದವರು'—ಎಂದು ಪುರಂದರ ದಾಸರು ಹಾಡುವಂತೆ ತ್ಯಾಗರಾಜರು 'ಜಲಜಾಸನ ಸನಕಾದಿ ಕರಾರ್ಚಿತ ಜಲದಾಭ ಸುನಾಭ ವಿಭಾಕರ ಹೃಜ್ಜಲೇಶ ಹರಿಣಾಂಕ'—ಎಂದು ಹಾಡುವರು. ಗಂಗೆ ಯಮುನೆ ಗೋದಾವರಿ ಕಾವೇರಿ, ಕಂಗೊಳಿಸುವ ಮಣಿಕರ್ಣಿಕೆ ತುಂಗಭದ್ರೆ ಕೃಷ್ಣವೇಣಿ ತೀರ್ಥಗಳೆಲ್ಲ ಮುಂಗಾಡಿಸುವ ಮೂಲವೃಕ್ಷದಲಿರುವರು— ಎಂದು ದಾಸರು ಹೊಗಳಿದಂತೆ ತ್ಯಾಗರಾಜರು 'ಚರಣಯುಗಂಬುಲು ವದುಲಕು ಪರಮ ವೈಕುಂಠಮಟ'—ಎಂದು ಹಾಡಿದ್ದಾರೆ. ಋಕ್ ಯಜುರ್ ಸಾಮ ಅಥರ್ವಣ ವೇದ ಮೋಕ್ಷಗಳು ಅಗ್ರಭಾಗದಲ್ಲಿದೆ— ಎಂದು ಪುರಂದರ ದಾಸರು ಸ್ಪಷ್ಟಪಡಿಸಿದ ರೀತಿಯಲ್ಲಿ ತ್ಯಾಗರಾಜರು ಶಿರಮುನ ನೈಗಮ ಕೋಟುಲು ಜೆಲಗುಚುನ್ನಾರಟ— ಎಂದು ಮಹಿಮೆ ಹೇಳುತ್ತಾರೆ.

ತುಲಸೀ ಸೇವಾಫಲವನ್ನು ಹೇಳುವುದು ಮತ್ತೊಂದು ವಿಧ. ಪುರಂದರದಾಸರು ವೃಂದಾವನವೆ ಮಂದಿರವಾಗಿಹ ಕೀರ್ತನೆಯಲ್ಲಿ 'ತುಲಸೀ ದರ್ಶನದಿಂದ ದುರಿತನಿವಾರಣ, ಸ್ಪರ್ಶನದಿಂದ ದೇಹ ಪಾವನ, ಸ್ಮರಣೆಯಿಂದ ಸಕಲಿಷ್ಟವು, ವೃತ್ತಿಕೆಧಾರಣೆಯಿಂದ ಮೂರು ಲೋಕವಶ. ತುಲಸಿಮಾಲೆಗಳಿಂದ ಮುಕ್ತಿಮಾರ್ಗ ಸುಲಭವಾಗುತ್ತವೆಂದು' ಹೇಳಿದ್ದಾರೆ.

ತಾನು ಮಾಡುವ ಪೂಜಾವಿಧಿಯನ್ನು ತ್ಯಾಗರಾಜರು ತುಲಸೀದಳಮುಲಚೇ, ತುಲಸೀಬಿಲ್ವ ಮಲ್ಲಿಕಾದಿ–ಕೀರ್ತನೆಗಳಲ್ಲಿ ಸ್ಪಷ್ಟಪಡಿಸಿದ್ದಾರೆ.

ಉರಮುನ ಮುಖಮುನ ಶಿರಮುನ ಭುಜಮುನ<br>
ಕರಮುನ ನೇತ್ರಮುನ ಚರಣ ಯುಗಮ್ಮುನ<br>
ಕರುಣತೋ ನೆನರುತೋ ಪರಮಾನಂದ<br>
ಮುತೋ<br>
ನಿರತಮ್ಮುನು ಶ್ರೀತ್ಯಾಗರಾಜು ನಿರುಪಾಧಿ<br>
ಕುಡೈ ಅರ್ಚಿಂತು

ತುಲಸೀದಳವನ್ನು ಪೂರ್ಣಿಮೆ, ಅಮಾವಾಸ್ಯೆ, ದ್ವಾದಶಿ, ಸೂರ್ಯ ಸಂಕ್ರಮಣ, ಮಧ್ಯಾಹ್ನ, ಸಂಧ್ಯಾಕಾಲದಲ್ಲಿ, ಅಶುಚಿ ವೇಳೆಯಲ್ಲಿ ಕೀಳಬಾರದೆಂದು ಶಾಸ್ತ್ರ ಹೇಳುತ್ತದೆ.

ಮೋಕ್ಷೈಕ ಹೇತೋ ಧರಣಿ ಪ್ರಸೂತೇ<br>
ವಿಷ್ಣೋಃ ಸಮರ್ಥಸ್ಯ ಗುರೋಶ್ಚ ಸುಪ್ರಿಯೇ<br>
ಆರಾಧನಾರ್ಥಂ ಪುರುಷೋತ್ತಮಸ್ಯ<br>
ಚಿನ್ನಾಮಿ ಪತ್ರಂ ತುಲಸೀ ಕ್ಷಮಸ್ವ

ಎಂದು ತುಲಸೀದಳವನ್ನು ಕೀಳುವಾಗಿ ಹೇಳುವುದು ಸಂಪ್ರದಾಯ.

ನಮಃ ಪರಮ ಕಲ್ಯಾಣಿ<br>
ನಮಸ್ತೇ ಪಾಪನಾಶನೀ<br>
ಭುಕ್ತಿ ಮುಕ್ತಿ ಪ್ರದೇ ದೇವಿ<br>
ತುಲಸೀ ತ್ವಾಂ ನಮೋಸ್ತುತೇ



# ತಿರುಮಲೆ ತಿರುಪತಿಗಳಲ್ಲಿ ವಸತಿ ಸೌಲಭ್ಯ

## ತಿರುಮಲೆ

| | | |
|---|---|---|
| ವಿಶೇಷ ರೀತಿಯ ಕಾಟೇಜುಗಳು | ದಿನವೊಂದಕ್ಕೆ | ರೂ 75–00 |
| ಟಿ.ಬಿ.ಸಿ ಒಳಗಿನ ಕಾಟೇಜುಗಳು | " | ರೂ 50–00 |
| ಎಸ್. ವಿ. ಅತಿಥಿಗೃಹ ತಿರುಮಲೆ | | |
| ಅ) ದೊಡ್ಡ ಕೋಣೆಗಳು | ,, | ರೂ 50–00 |
| ಆ) ಮೂಲೆಯ ಕೋಣೆಗಳು | ,, | ರೂ 40–00 |
| ಇ) ಕಿರಿಯ ಕೋಣೆಗಳು | ,, | ರೂ 35–00 |
| ಎಚ್. ಆರ್. ಜಿ. ಕಾಟೇಜು | ,, | ರೂ 150–00 |
| ಮದುವೆಯ ಹಾಲ್‌ಗಳು | | |
| ರೂಯಾ ಕಾಟೇಜು | ,, | ರೂ 80–00 |
| ಗೋಗಿನೇನಿ ಕಾಟೇಜು | ,, | ರೂ 80–00 |
| ಸಿ.ಸಿ. ಕಾಟೇಜು | ,, | ರೂ 100–00 |
| ಎಸ್.ಎಂ.ಸಿ. | ,, | ರೂ 50–00 |
| ಎ.ಟಿ.ಸಿ. ನಂ. | ,, | ರೂ 80–00 |
| ಶಂಖುಮಿಟ್ಟ ಕಾಟೇಜುಗಳು (ಪೂರ್ತಿ) | | ರೂ 20–00 |
| ಶೇಷಾದ್ರಿನಗರ ,, | ,, | ರೂ 20–00 |
| ಅಂಜನಾದ್ರಿನಗರ ,, | ,, | ರೂ 20–00 |
| ಗರುಡಾದ್ರಿನಗರ ,, | ,, | ರೂ 20–00 |

ವಿವರಗಳಿಗೆ: ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ. ತಿರುಮಲೆ

## ತಿರುಪತಿ

| | |
|---|---|
| ಶ್ರೀನಿವಾಸ ಸತ್ರ ಎರಡು ಹಾಸಿಗೆಗಳಕೋಣೆ | ರೂ 20–00 |
| ನಾಲ್ಕು " | ರೂ 25–00 |
| ಒಂದು " | ರೂ 15–00 |
| ಶ್ರೀ ಪದ್ಮಾವತಿ ಅತಿಥಿಗೃಹ | |
| ಹವಾನಿಯಂತ್ರಿತ 2 ಹಾಸಿಗೆಗಳ ಕೋಣೆ | ರೂ 50–00 |
| ,, ಒಂದು ಹಾಸಿಗೆಯ ಕೋಣೆ | ರೂ 30–00 |
| ಶ್ರೀ ವೆಂಕಟೇಶ್ವರ ಅತಿಥಿಗೃಹ | |
| ಎರಡು ಹಾಸಿಗೆಗಳ ಕೋಣೆ | ರೂ 20–00 |

ವಿವರಗಳಿಗೆ : ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ. ತಿರುಪತಿ.

ತಿರುಮಲೆ–ತಿರುಪತಿಗಳಲ್ಲಿನ ವಸತಿಯನ್ನು ಕಾಯ್ದಿರಿಸಬಹುದು. ಆಯಾ ವಸತಿಸೌಕರ್ಯಕ್ಕೆ ಅನುಗುಣವಾದ ಹಣದ ಡಿ. ಡಿ. ಯನ್ನು ಕಳುಹಿಸುವಾಗ ಅಂಚೆ ವಿಳಾಸ ಹಾಗೂ ಅಪೇಕ್ಷಿತ ವಸತಿ ಸೌಕರ್ಯದ ವಿವರಗಳನ್ನು ಸ್ಪಷ್ಟವಾಗಿ ಇಂಗ್ಲೀಷಿನಲ್ಲಿ ಬರೆಯಿರಿ. ಅಪೇಕ್ಷಿತ ವಸತಿ ಸೌಕರ್ಯ ಲಭ್ಯವಿಲ್ಲದಾಗ ಇತರೆ ವಸತಿಯನ್ನು ಕಾಯ್ದಿರಿಸಿ ಹೆಚ್ಚಿನ ಹಣವನ್ನು ನೀವು ಇಲ್ಲಿ ಬಂದಾಗ ಹಿಂದಿರುಗಿಸಲಾಗುವುದು. ಕಾಯ್ದಿರಿಸಿದ ಬಗ್ಗೆ ಪತ್ರವನ್ನು ಕಳುಹಿಸಲಾಗುತ್ತದೆ, ಅದನ್ನು ತೆಗೆದುಕೊಂಡೇ ತಿರುಪತಿ; ತಿರುಮಲೆಗಳಿಗೆ ಬನ್ನಿರಿ. ಅಂಚೆಯಲ್ಲಿನ ವಿಳಂಬಕ್ಕೆ ತಿ.ತಿ.ದೇ. ಹೊಣೆಯಲ್ಲ. ಮೀಸಲಾತಿಯ ಹಕ್ಕು ತಿ.ತಿ.ದೇ. ಗಳದ್ದು. ಇಲ್ಲಿನ ದರಗಳು ಬದಲಾಯಿಸಲ್ಪಡಬಹುದು. ತಿರುಮಲೆ ತಿರುಪತಿ ದೇವಸ್ಥಾನಗಳು.

## ಕಿಶೋರಜಗತ್

# ರಾಜಯೋಗಿ ಶಿವಾಜಿ

ಪಂತ್, ಅಗೋ ನೋಡಿರಿ. ದೂರದಲ್ಲಿ ಕಾಣುತ್ತಿರುವ ಆ ಅವಶೇಷಗಳನ್ನು ಗಮನಿಸಿದಿರಾ?

ಮಹಾರಾಜ್, ಇಲ್ಲಿ ಹರಿಯುತ್ತಿರುವ ಕೃಷ್ಣಾನದಿಯ ಎರಡೂ ದಂಡೆಗಳ ಮೇಲೆ ಒಂದು ಕಾಲದಲ್ಲಿ ಚಂದ್ರಗುಪ್ತ ವಂಶದವರು ರಾಜ್ಯವಾಳುತ್ತಿದ್ದರೆಂದು ತಿಳಿದುಬರುತ್ತದೆ, ಆದುದರಿಂದಲೇ ಶ್ರೀಶೈಲದ ಮಾರ್ಗದಲ್ಲಿ ಆ ಆ ಹಿಂದಿನವರು ಕಟ್ಟಿಸಿದ ಕುರುಹುಗಳನ್ನು ನಾವು ಇಂದಿಗೂ ನೋಡಬಹುದಾಗಿದೆ.

ಹಾಗಾದರೆ ಚಂದ್ರಗುಪ್ತರ ಸಾಮ್ರಾಜ್ಯವೆಂದರೆ ಅಳಿದುಳಿದ ಈ ಕುರುಹು ಎಂಬರ್ಥವೇ? – ಛತ್ರಪತಿ ಶಿವಾಜಿರಾಜನು ಪುನಃ ಪ್ರಶ್ನೆಮಾಡಿದ.

ರಾಜೇ, ಕಾಲನ ಪ್ರವಾಹವನ್ನು ತಡೆದು ನಿಲ್ಲಿಸಲು ಯಾರಿಂದ ಸಾಧ್ಯ; ಸಂಸ್ಕೃತದಲ್ಲಿ ಅದಕ್ಕಾಗಿಯೇ "ಕಾಲಾಯ ತಸ್ಮೈನಮಃ" ಎಂದು ಕಾಲನಿಯಾಮಕನಿಗೆ ಶರಣು ಹೋಗುತ್ತಾರೆ.

ರಘುನಾಥಪಂತ್ ಹನುಮಂತೆಯವರು ಉತ್ತರಿಸಿದ ಮಾತುಗಳನ್ನು ಕೇಳುತ್ತಿದ್ದಂತೆ ರಾಜನು ಅಂತರ್ಮುಖಿಯಾದ. ಆತನಿಗರಿವಿಲ್ಲದಂತೆ ಹೃದಯಾಂತರಾಳದಿಂದ ಕೆಲವು ಮಾತುಗಳು ಹೊರಬಂದವು.

"ಈ ವಿಶ್ವದ ಮೇಲೆ ಕಾಣಬರುವ ಪ್ರತಿಯೊಂದು ಪದಾರ್ಥಗಳು ಒಂದಲ್ಲೊಂದು ದಿನ ನಾಶವಾಗಲೇಬೇಕಲ್ಲವೇ?, ಅದನ್ನೇ ಸೃಷ್ಟಿಯ ನಿಯಮ ಎಂದು ಹೇಳುತ್ತ ಬಂದಿದ್ದಾರಲ್ಲವೇ? ಆ ವಸ್ತುಗಳೆಲ್ಲ ಕಡೆಗೊಂದುದಿನ ಇಲ್ಲದಂತಾಗುವುದು ಖಚಿತ. ಅಂದಮೇಲೆ ಈ ನಿಗೂಢ ತತ್ತ್ವವನ್ನು ಪರೀಕ್ಷಿಸಿದಂತೆಲ್ಲಾ ಈ ವಿಶ್ವದ ಮೇಲೆ ನಮ್ಮದೆನ್ನುವ ಅಸ್ತಿತ್ವವು ಯಾವುದಾದರೂ ಉಳಿಯಲು ಸಾಧ್ಯವಾದೀತೆ? ಮುಗಿಲೆತ್ತರಕ್ಕೆ ಬೆಳೆದುನಿಂತ ಅಭೇದ್ಯವಾದ ಪರ್ವತ ಶ್ರೇಣಿಗಳ ಪ್ರದೇಶಗಳನ್ನು ಗುರುತಿಸಿ ಅವುಗಳ ತುಟ್ಟತುದಿ ಭಾಗದಲ್ಲಿ ನಾವು ಅತಿಬಲಾಢ್ಯವಾದ ಕೋಟೆಗಳನ್ನು ನಿರ್ಮಿಸಿದೆವು, ಆ ಕೋಟೆ ಕೊತ್ತಲಗಳು ಸುಭದ್ರವಾಗಿ ಉಳಿಯುವಂತೆ ನಾನಾ ತರಹದ ಪ್ರಯತ್ನಗಳನ್ನೂ ಮಾಡಿದೆವು, ನಮ್ಮ ಕೋಟೆಗಳಂತೆ ನಮ್ಮಿಂದ ಸ್ಥಾಪಿತವಾದ ಸ್ವರಾಜ್ಯದ ತಳಪಾಯವು ಸಹ ಭದ್ರವಾಗಿ ಉಳಿಯುವಂತೆ ಲಕ್ಷಾಂತರ ಯೋಧರನ್ನು ಅದಕ್ಕಾಗಿ ಸಿದ್ಧಪಡಿಸಿದೆವು. ಆದರೆ ಇದೆಲ್ಲ ಯಾರಿಗಾಗಿ? ಯಾತಕ್ಕಾಗಿ? ನಾವು ಸ್ಥಾಪಿಸಿದ ಸ್ವರಾಜ್ಯದಲ್ಲಿ ನಮ್ಮ ಧರ್ಮ, ನಮ್ಮ ದೇವರು, ನಮ್ಮ ದೇಶ ಎಂಬ ಕಲ್ಪನೆಯನ್ನು ಬೆಳೆಸುವುದಕ್ಕಾಗಿಯೇ ಇದೆಲ್ಲವನ್ನೂ ಮಾಡಿದೆವು. ಈ ರಾಷ್ಟ್ರ ನಮ್ಮದು, ನಮ್ಮದೆನ್ನುವ ಎಲ್ಲದರ ಮೇಲೂ ನಮ್ಮ ಅಧಿಕಾರವಿರಬೇಕು. ಈ ಮಾತನ್ನು ನಮ್ಮಂತೆ ಎಲ್ಲರೂ ತಿಳಿದುಕೊಂಡು ನಡೆಯುವಂತಾಗಬೇಕು. ಈ ನಮ್ಮದೆನ್ನುವುದನ್ನು ಸಾಧಿಸಲು ಹೊರಟಾಗ ಅದಕ್ಕಾಗಿ ಸಮರ್ಪಿತವಾದ ಬಲಿದಾನಗಳ ಸಂಖ್ಯೆಯನ್ನು ನಾವಿಟ್ಟುಕೊಂಡು ಬಂದಿದ್ದೇವೆಯೇ? ನಮ್ಮದೆನ್ನುವುದನ್ನು ಸಾಧಿಸಲು ನಾವು ಅದೆಷ್ಟು ವಿಪತ್ತುಗಳನ್ನು ಎದುರಿಸಲಿಲ್ಲ. ಹಾಗಾದರೆ ಈ ಕಾರ್ಯ ಸಾಧನೆಗಾಗಿ ಒಂದು ತಲೆಮಾರನ್ನೇ ನಾವು ಬಲಿಕೊಟ್ಟಂತಾಯಿತೆನ್ನಬೇಕೇ? ತ್ಯಾಗ ಬಲಿದಾನಗಳಿಂದ ಗಳಿಸಿಕೊಂಡು ಬಂದಿರುವ ಹಾಗೂ ನಮ್ಮದಾಗಿ ಮಾಡಿಕೊಂಡಿರುವ ಈ ಸಾಮ್ರಾಜ್ಯವನ್ನು ನಮ್ಮಂತೆಯೇ ಮುಂದಿನ ಸಂತಾನರು ರಕ್ಷಿಸಿಕೊಂಡು ಹೋಗುತ್ತಾರೆಯೇ? ಹಾಗಾದರೆ ನಮ್ಮ ಈ ಮಾತಿಗೆ ಭರವಸೆಯನ್ನಾರು ಕೊಡಬಲ್ಲರು.

"ಪಂತ್, ನಾವು ಹೇಳುತ್ತಿರುವ ಈ ಮಾತುಗಳಲ್ಲಿ ವಿಶ್ವಾಸವನ್ನಿಡಲು ಯಾರಿಂದ ಸಾಧ್ಯ. ಈ ಜೀವನಿಗೆ ತಾನು ಗರ್ಭವಾಸವನ್ನು ಅನುಭವಿಸಿದ ಅನುಭವವು ಎಂದಾದರೊಂದುದಿನ ಬಂದರೂ ಬರಬಹುದು, ಆದರೆ



ಮೃತ್ಯು, ಅದನ್ನಾರು ಬಲ್ಲರು, ಯಾರಿಗೂ ಸುಳಿವು ಕೊಡದಂತೆ ಅದು ತನ್ನ ಅಧಿಕಾರವನ್ನು ನಡೆಸುತ್ತದೆ. ಅದು ತನ್ನದೇ ಆದ ವಿಜಯವನ್ನು ಗಳಿಸುತ್ತದೆ. ಹಾಗಾದರೆ ಆ ವಿಜಯದ ಗಳಿಗೆ ಬರುವುದು ಯಾವಾಗ? ಅದನ್ನು ಖಚಿತವಾಗಿ ಯಾರಾದರೂ ಹೇಳುತ್ತಾರೆಯೇ? ಹೀಗಿದ್ದರೂ ಈ ಜೀವನು ಜಡಪಡಿಸುತ್ತಾನೆ. ಅದು ಯಾತಕ್ಕಾಗಿ? ಇಂದು ನಮ್ಮ ಪೂರ್ವಜರು ನಮಗಾಗಿ ಬಿಟ್ಟು ಹೋಗಿರುವ ಇಂಥ ಅವಶೇಷಗಳಿಗೆ ಹಿಂದೂಸ್ಥಾನದಲ್ಲಿ ಕೊರತೆಯೆಂಬುದಿದೆಯೆ? ಆ ಹಿಂದಿನವರಂತೇ ನಾವೂ ಸಹ ನಮ್ಮ ಮುಂದಿನವರಿಗಾಗಿ ಮಾಡಿದುದೆಲ್ಲವನ್ನೂ ಇಲ್ಲಿಯೇ ಬಿಟ್ಟು ಹೋಗಬೇಕಲ್ಲವೇ? ಹಾಗಾದರೆ ಮಾನವನಿಗೆ ಸ್ವಪ್ನ ಸುಖವೆಂಬುದು ಇಲ್ಲದೇ ಹೋಗಿದ್ದಲ್ಲಿ ಅದೆಷ್ಟು ಚೆನ್ನಾಗಿರುತ್ತಿತ್ತು. ಎಂದೆನಿಸುತ್ತದಲ್ಲವೆ?"

ರಾಜನ ಈ ಮಾತುಗಳನ್ನು ಕೇಳುತ್ತಿದ್ದಂತೆ ರಘುನಾಥಪಂತರಿಗೆ ಮಹಾನ್ ಯೋಗಿಯ ದರ್ಶನವಾದಂತಾಯಿತು. ಹಿಂದೂಪದಪಾದಶಾಹಿತ್ವದ ಛತ್ರಪತಿ ಎಂದೆನಿಸಿಕೊಳ್ಳುತ್ತಿದ್ದ ಶಿವಾಜಿ ರಾಜನು ಅವರಿಗೆ ರಾಜಯೋಗಿಯಾಗಿ, ಸಿದ್ಧಪುರುಷನಾಗಿ, ರಾಷ್ಟ್ರಪುರುಷನಾಗಿ ಕಾಣಬರತೊಡಗಿದ.

ಶ್ರೀ ಆದ್ಯರಾಮಾಚಾರ್ಯ

(16ನೇ ಪುಟದಿಂದ)

ಸೊಪ್ಪು ಕೊಡದೇ ನಿಂತು ಬಿಟ್ಟರು. ಆಗ ರಾಜರಾದ ಯಾಮುನಾಚಾರ್ಯರು ಸೊಪ್ಪು ಏಕೆ ಮಾಡುತಿಲ್ಲ ಎಂದಾಗ ಅಡಿಗೆಭಟ್ಟರು ಯಾರೋ ಮುದುಕರು ದಿನವೂ ತಂದುಕೊಡುತ್ತಿದ್ದರು. ಈಗ ಬರುತ್ತಿಲ್ಲ — ಎಂದಾಗ ಅವರಾರೆಂದು ತಿಳಿಯುವ ಕುತೂಹಲದಿಂದ ಅವರಿಗೆ ಹೇಳಿ ಕಳುಹಿಸಿ, "ಏಕೆ ಸೊಪ್ಪನ್ನು ಕೊಡುತ್ತಿದ್ದಿರಿ. ನಿಮಗೇನಾಗಬೇಕು" — ಎಂದು ಕೇಳಿದಾಗ, ರಾಮಮಿಶ್ರರು (ಮಣಕ್ಕಾಲ್ ನಂಬಿ ಎಂದು ಅವರ ಹೆಸರು) "ನನಗೇನೂ ಬೇಕಾಗಿಲ್ಲ. ನಿಮಗಾಗಿ ಬರುತ್ತಿದ್ದೇನೆ. ನಿಮ್ಮ ಪೂರ್ವಜರೂ, ನಮ್ಮ ಆಚಾರ್ಯರೂ ಆದ ಶ್ರೀಮನ್ನಾಥಮುನಿಗಳು ನಮಗೊಂದು ನಿಧಿ ಅನುಗ್ರಹಿಸಿದ್ದಾರೆ. ಅದನ್ನು ತಮಗೆ ಕೊಟ್ಟು ಹೋಗಬೇಕು ಎಂದು ಬರುತ್ತಿದ್ದೆ." ಎಂದರು. ಅಂದಿನಿಂದ ರಾಮಮಿಶ್ರರು ಯಾಮುನಾಚಾರ್ಯರಿಗೆ ಭಗವದ್ಗೀತೆ, ರಹಸ್ಯಾರ್ಥಗಳು ಮೊದಲಾದುವನ್ನು ಕಲಿಸಿ, ಅವರನ್ನೂ ಕರೆದು ಕೊಂಡು ಶ್ರೀರಂಗಕ್ಕೆ ಹೋಗಿ 'ಶ್ರೀರಂಗನಾಥನ ದರ್ಶನ' ಮಾಡಿಸಿ, 'ಇದೇ ನಮ್ಮ ಕುಲಧನ, ಇದನ್ನು ಸಂರಕ್ಷಿಸಿ' ಎಂದಾಗ ಆನಂದ ಪರವಶರಾದ ಯಾಮುನಾಚಾರ್ಯರು ಇಷ್ಟೆಲ್ಲಕಾಲ ವ್ಯರ್ಥವಾಯಿತಲ್ಲಾ ಎಂದು ಸರ್ವಸಂಗ ಪರಿತ್ಯಾಗಿಯಾಗಿ ಸನ್ಯಾಸ ಸ್ವೀಕರಿಸಿ ಭಗವಂತನ ಕೈಂಕರ್ಯದಲ್ಲೇ ನಿರತರಾಗಿದ್ದಾರು.

ಇವರ ಚರಿತ್ರೆಯಲ್ಲಿ ಶಿಷ್ಯನ ಆದರ್ಶಕ್ಕಿಂತ ಹೆಚ್ಚಾಗಿ ಗುರುವಿನ ಆದರ್ಶದ ಹಿರಿಮೆ ಕಾಣಬಹುದು. ಆಚಾರ್ಯರ ಆಜ್ಞೆಯಂತೆ, ದಿನವೂ ಶಿಷ್ಯನಲ್ಲಿಗೆ ಹೊರಟು, ಕಾದು ಕಡೆಯಲ್ಲಿ ಅವರಿಗೆ ವಿಶೇಷಾರ್ಥಗಳನ್ನು ಕೊಟ್ಟು ಪರಮಾತ್ಮನ ತತ್ತ್ವ ತಿಳಿಸಿದ ಮಹಾನುಭಾವರು ರಾಮಮಿಶ್ರರು. ಅವರ ಯೋಗ್ಯ ಶಿಷ್ಯ ಯಾಮುನಾಚಾರ್ಯರು.

## ವಡುಹನಂಬಿ ಆಚಾರ್ಯ- ರಾಮಾನುಜರು

ವಡುಹನಂಬಿಗಳು ರಾಮಾನುಜರ ಅಂತರಂಗ ಶಿಷ್ಯರಾಗಿದ್ದು, ವಿಶಿಷ್ಟಾದ್ವೈತ ಮತ ಪ್ರಚಾರಕರಾಗಿ, ಎಪ್ಪತ್ತನಾಲ್ಕು ಸಿಂಹಾಸನಾಧಿಪತಿಗಳಲ್ಲಿ ಒಬ್ಬರೆಂದು ಪ್ರಸಿದ್ಧರಾಗಿದ್ದಾರೆ. ವಡುಹನಂಬಿಗಳಿಗೆ ಪರಮಾತ್ಮನಿಗಿಂತ, ಆ ಪರಮಾತ್ಮ ತತ್ತ್ವವನ್ನು ಪದೇಶಿಸಿದ ಆಚಾರ್ಯರೇ ಪರದೈವ. ಆಚಾರ್ಯ ಕೈಂಕರ್ಯವನ್ನು ಬಿಟ್ಟು, ಭಗವತ್ಕೈಂಕರ್ಯಕ್ಕೆ ಅವರು ಹೋಗಲೇ ಇಲ್ಲ. ಮಧುರಕವಿ ಆಳ್ವಾರರಂತೆ 'ತೇವುಮತ್ತರಿಯೇನ್' -ಬೇರೊಂದು ದೈವನಾನರಿಯೆ, ಎಂದಿದ್ದರು. ಇವರು ರಾಮಾನುಜರಿಗೆ ಹಾಲುಕಾಸಿಕೊಡುವ ಕೈಂಕರ್ಯದಲ್ಲಿ ನಿರತರಾಗಿದ್ದರು. ಒಂದುಸಲ ಶ್ರೀರಂಗದಲ್ಲಿ ರಂಗನಾಥನ ಉತ್ಸವ ಬಂದಾಗ ರಾಮಾನುಜರೂ ಶಿಷ್ಯರೂ ದೇವರನ್ನು ಸೇವಿಸಲು ಹೊರಟರು. ಆಗ ವಡುಹನಂಬಿಗಳನ್ನೂ ಕರೆದಾಗ, "ನಿಮ್ಮ ದೇವರ ಸೇವೆಗೆಂದು ಬಂದರೆ, ನಮ್ಮ ದೇವರಹಾಲು ಹಾಳಾಗುವುದು, ನೀವೇಹೋಗಿ" ಎಂದರು. ಮತ್ತೊಂದುಸಲ ಮಠದಲ್ಲಿ ಪ್ರಸಾದವನ್ನು ತೆಗೆದು ಕೊಂಡಮೇಲೆ ಕೈತೊಳೆಯದೇ, ತಲೆಗೆ ಒರಸಿಕೊಂಡ ವಡುಹನಂಬಿಗಳಿಗೆ ರಾಮಾನುಜರು ಕೈ ತೊಳೆದು ಕೊಳ್ಳಲು ಹೇಳಿದರು. ಗುರುಗಳಾಜ್ಞೆಯಂತೆ ಕೈ ತೊಳೆದು ಕೊಂಡರು. ಆ ಮೇಲೊಂದು ಸಲ ಶ್ರೀರಂಗನಾಥನ ದೇವಸ್ಥಾನದಲ್ಲಿ ಪ್ರಸಾದವನ್ನು ತೆಗೆದುಕೊಂಡು ಕೈ ತೊಳೆದು ಕೊಂಡರು. ಇದನ್ನು ಕಂಡ ರಾಮಾನುಜರು ಏಕೆ ಹಾಗೆ ಮಾಡಿದೆ ಎಂದು ಕೇಳಿದಾಗ, 'ನನ್ನ ದೇವರ ವಿಷಯದಲ್ಲಿ ಒಂದು, ನಿಮ್ಮ ದೇವರ ವಿಷಯದಲ್ಲೊಂದು ಏಕೆ ಎಂದು ಕೈ ತೊಳೆದುಕೊಂಡೆ' ಎಂದರು. ರಾಮಾನುಜರು ವಿಷಯಗ್ರಹಿಸಿ ಸುಮ್ಮನಾದರು. ಒಂದು ಸಂದರ್ಭದಲ್ಲಿ ಮಠದ ಎಂಬೆರುಮಾನಾರ್ (ದೇವರು) ರನ್ನು ತೆಗೆದು ಕೊಂಡು ಬರಲು ವಡುಹನಂಬಿಗೆ ಹೇಳಿದರು. ಅವರು ಹಾಗೆಯೇ ಮಾಡಿದರೂ, ಆ ದೇವರ ಸಂಪುಟದ ಮೇಲೆ ರಾಮಾನುಜರ ಪಾದುಕೆಗಳನ್ನು ಇಟ್ಟುಕೊಂಡಿದ್ದರು. ಇದನ್ನು ಕಂಡ ರಾಮಾನುಜರ 'ವಡುಹ, ಏನಿದು ನಿನ್ನ ಚೇಷ್ಟೆ' ಎಂದಾಗ 'ಗುರುಗಳೇ ನಿಮ್ಮ ದೇವರಿಗಿಂತ ನಮ್ಮ ದೇವರು ಕಡಿಮೆಯೇ — ನಿಮ್ಮ ದೇವರು ನಿಗ್ರಹಾನುಗ್ರಹಶಕ್ತರು. ನಮ್ಮ ದೇವರು ಅನುಗ್ರಹ ಮಾತ್ರ ಬಲ್ಲರು. ನಿಗ್ರಹಿಸಲು ಅವರಿಗೆ ಬರದು ಮತ್ತು ಕೃಪಾಮಾತ್ರ ಪ್ರಸನ್ನರು' ಎಂದಾಗ, ಶಿಷ್ಯರೆಲ್ಲರೂ ಇವರ ಗುರುಭಕ್ತಿಗೆ ತಲೆತೂಗಿದರು. ಸಾಲಿಗ್ರಾಮ ಎಂಬ ಊರಲ್ಲಿ ವಡುಹ ನಂಬಿಗಳಿಗಾಗಿ ರಾಮಾನುಜರು ಪಾದತೀರ್ಥವನ್ನು ಅನುಗ್ರಹಿಸಿದರು. ಅಂತಹ ಶ್ರೀಪಾದತೀರ್ಥ ಕೊಳವನ್ನು ಇಂದಿಗೂ ಸಾಲಗ್ರಾಮದಲ್ಲಿ ಕಾಣಬಹುದಾಗಿದೆ. ಅಂತ್ಯಕಾಲದಲ್ಲಿ ಇವರ ತೊಡೆಯ ಮೇಲೆ ಶ್ರೀಪಾದಗಳಿಟ್ಟು ಪರಮಪದಿಸಿದರು ರಾಮಾನುಜರು. ಇವರ ಚರಮಪರ್ವ ನಿಷ್ಠೆಯನ್ನಾಶಿಸಿ, ಮಣವಾಳಮಹಾಮುನಿಗಳು ತಮ್ಮ 'ಆರ್ತಿಪ್ರಬಂಧ'ದಲ್ಲಿ ಹೀಗೆ ಹೇಳಿದ್ದಾರೆ.

"ಯತಿರಾಜಾ, ನಿಮ್ಮನ್ನು ಬಿಟ್ಟ ಬೇರೊಂದು ದೈವವನು ಕಂಡರಿಯದ ವಡುಹನಂಬಿಗಳ ಆಚಾರ್ಯನಿಷ್ಠೆಯನ್ನು ನೀವು ನನಗೂ ಕರುಣಿಸಿ. ಎಂದೆಂದಿಗೂ ನಿಮ್ಮ ದಿವ್ಯಹೃದಯಕ್ಕಾನಂದ ತರುವಂತೆ ನನ್ನ ಕೈಂಕರ್ಯವನ್ನು ಕೈಗೊಳ್ಳಬೇಕು" ಇದವರ ಸವಿನಯಪ್ರಾರ್ಥನೆ. ದೇವರೂ ಬೇಡವೆಂದು, ಆಚಾರ್ಯರನ್ನೇ ನಂಬಿದ ಶಿಷ್ಯರು ಲೋಕದಲ್ಲಿ ವಿರಳ. ಈ ಗುರು ಶಿಷ್ಯರ ಆದರ್ಶ ಅತಿ ಶ್ಲಾಘ್ಯವಾದುದು.

## ಪಶ್ಚಾತ್ಸುಂದರದೇಶಿಕರು- ಕಲಿವೈರಿದಾಸರು

ಇವರಿಬ್ಬರ ಆದರ್ಶ, ಗುರುಶಿಷ್ಯರ ಆದರ್ಶಕ್ಕೆ ಮಕುಟಪ್ರಾಯವಾಗಿದೆ. ಶ್ರೀರಂಗದಲ್ಲಿ ನಂಜೀಯರೆಂಬ ಗುರುಗಳ ಶಿಷ್ಯ ಶ್ರೇಷ್ಠರಾದ ನಂಬಿಳ್ಳೈ (ಕಲಿವೈರಿದಾಸರು) ಎಂಬವರು ಪೂರ್ವಾಚಾರ್ಯರ ಗ್ರಂಥಗಳ ಉಪನ್ಯಾಸಮಾಡುವುದರಲ್ಲಿ ಬಹು ಗಟ್ಟಿಗರು. ಸ್ವಾರಸ್ಯವಾದ ಅವರ ಉಪನ್ಯಾಸಗಳನ್ನು ಕೇಳಲು ಬಹುಜನರು ಬರುತ್ತಿದ್ದರಲ್ಲದೇ ಅವರಲ್ಲನೇಕ ಶಿಷ್ಯರು ಅಧ್ಯಯನ ಮಾಡುತ್ತಿದ್ದರು. ಶಿಷ್ಯರಲ್ಲಿ ವಯೋಮಿತಿ ಏನೂ ಇರಲಿಲ್ಲ; ವಯೋವೃದ್ಧರೂ ಜ್ಞಾನವೃದ್ಧರೂ ಆದ ಪಿನ್ಬಳಿಕಿಯ ಪೆರುಮಾಳ್ ಜೀಯರ್ ಎಂಬವರು, ತಮ್ಮ ಗುರುಗಳು ಉಪನ್ಯಾಸ, ಕಾಲಕ್ಷೇಪಗಳನ್ನು ಮಾಡುತ್ತಿದ್ದಾಗ, ಇವರು ಸದಾ ಬೀಸಣಿಗೆ ಹಿಡಿದು ಗಾಳಿಹಾಕುವ ಕೈಂಕರ್ಯದಲ್ಲಿ ನಿರತರಾಗಿತ್ತಿದ್ದರು. ಎಂಬತ್ತಕ್ಕೂ ಮೀರಿದವಯಸ್ಸಾದ ಇವರಿಗೆ ಖಾಯಿಲೆ ಬಂದು ಸಾಯುವಸ್ಥಿತಿ ಬಂದಾಗ, ತಮ್ಮ ಜೊತೆಯವರಾದ ಶಿಷ್ಯರೆಲ್ಲರಿಗೂ ತಮಗೆ ದೀರ್ಘಾಯಸ್ಸು ಕೊಡುವಂತೆ ದೇವರನ್ನು ಪ್ರಾರ್ಥಿಸಿ ತಾವಿನ್ನೂ ಬಹಳಕಾಲ ಬದುಕಬೇಕು ಎಂಬ ಕೇಳಿ ಕೊಳ್ಳುತ್ತಿದ್ದರು. ಹಾಗೇ ಆಗಲಿ ಎಂದರೂ ಶಿಷ್ಯರು, ಗುರುಗಳು ಹತ್ತಿರಹೋಗಿ ಅವರ ಅಭಿಪ್ರಾಯ ತಿಳಿಸಿದರು. ಗುರುಗಳು ಖಾಯಿಲೆಯಿಂದ ಮಲಗಿದ್ದ ಜೀಯರ್ ಬಳಿಗೆ ಹೋಗಿ, 'ಜೀವಿಸಲು ಆಶಿಪಡುವುದು ಸರಿಯಲ್ಲ 'ಬೇಗನೇ' ದೇವರ ಸನ್ನಿಧಿಗೆ ಹೋಗಲಾಸೆ ಪಡಿ ಇಹಲೋಕದ ಆಸೆಬಿಡಿ' ಎಂದರು. ಆಗ ಅವರು ಗುರುಗಳಪಾದ ಹಿಡಿದು "ದಯವಿಟ್ಟುಹಾಗೆ ಹೇಳಬೇಡಿ ನಾನು ಬದುಕಬೇಕು. ನನಗೆ ವೈಕುಂಠವೂ ಬೇಡ. ಮೋಕ್ಷವೂ ಬೇಡ. ತಮ್ಮ ಉಪನ್ಯಾಸಗಳನ್ನು ಕೇಳಿಕೊಂಡು, ತಮ್ಮ ಸೇವೆಯನ್ನು ಬಹಳ ಕಾಲ ಮಾಡುತ್ತಿರಬೇಕೆಂಬಾಸೆ ಒಂದೇ ಈ ದಾಸನಿಗೆ" ಎಂದರು. ಅಲ್ಲಿ ನೆರೆದಿದ್ದ ಶಿಷ್ಯರೂ, ಗುರುಗಳೂ ಇವರ ಗುರುಭಕ್ತಿಗೆ ತಲೆದೂಗಿದರು. ದೇವರ ಕೃಪೆಯೋ, ಗುರುಗಳ ಆಶೀರ್ವಾದ ಬಲವೋ, ಅವರ ಖಾಯಿಲೆವಾಸಿಯಾಗಿ ಮತ್ತೆ ಬಹಳಕಾಲ ಗುರುಗಳ ಸೇವೆಯಲ್ಲಿ ನಿರತರಾಗಿದ್ದರೆಂಬ ಇವರ ಚರಿತ್ರೆಯ ಆದರ್ಶ ಅತಿಶ್ಲಾಘ್ಯವಾದುದು.

# ಆಶುತೋಷ ಆಶುಕೋಪ

"ಲೋಕ ಭೀಕರವಾದ ಕುರುಕ್ಷೇತ್ರಸಂಗ್ರಾಮ ಪ್ರಾರಂಭವಾಗಿ ಸುಮಾರು ಒಂದು ಸಪ್ತಾಹ ಮುಗಿಯುತ್ತ ಬಂದಿದೆ. ನನ್ನ ಛಲದ ಕೆನ್ನಾಲಿಗೆಗೆ ರಕ್ತದಾಹ ತೀರಲಿಲ್ಲ. ತಾವು ಹನ್ನೊಂದಕ್ಷೋಹಿಣೀ ಸೈನ್ಯದ ನೇತಾರರಾಗಿ ನನ್ನ ಕೀರ್ತಿಗೆ ಕಳಶ ವಿಡುತ್ತೀರಿ ಎಂದು ಭಾವಿಸಿದ್ದೆ. ಆದರೆ ತಮ್ಮ ಬಾಹುಶಕ್ತಿ ಮಮತೆಯಿಂದಾಗಿ-ಮೃದುವಾದಂತೆ ಕಾಣುತ್ತಿದೆ. ರಣರಂಗದಲ್ಲಿ ಆಗತ್ಯವಾದದ್ದು ಹಟ–ಛಲ–ಸಾಹಸ – ದೃಢತೆಗಳೇ ಹೊರತು ಪ್ರೀತಿ–ವಿಶ್ವಾಸ–ಮಮತೆ–ಅಭಿಮಾನಗಳಲ್ಲವೆಂದು–ಅಪಾರ ಅನುಭವವುಳ್ಳ ತಮಗೆ–ತಿಳಿಸಬೇಕಾದ ಸಂದರ್ಭ ಬಂದದ್ದು ನಿಜಕ್ಕೂ ಸೋಜಿಗವಾಗಿ ಕಾಣುತ್ತದೆ".

ದುರ್ಯೋಧನ ರಭಸವಾಗಿ ತನ್ನ ಉತ್ತರೀಯವನ್ನೆಳೆದು ಕೊಳ್ಳುತ್ತ ಹೇಳಿದ. ಆತನ ಸಹಜ ರೌದ್ರ ಮುಖ ರೌದ್ರತರವಾಗಿದೆ. ಗಂಟಿಕ್ಕಿ ಹುಬ್ಬು – ತಜ್ಜನ್ಯಲಲಾಟರೇಖಾವಳಿ, ಆತನ ಅಂತರಂಗದ ತುಮುಲಕ್ಕೆ ಸಮುಜ್ವಲ ಸಾಕ್ಷಿಯಾಗಿದೆ. ಶಿಬಿರದ ವಾತಾವರಣ ಗಂಭೀರವಾಗಿದೆ ಸಮಯ ಅರ್ಧರಾತ್ರಿ ಮೀರುತ್ತಿದೆ.

"ಆಯುಷ್ಮಾನ್ ದುರ್ಯೋಧನ, ಗೊರಜು ಕಲ್ಲೊಂದು ಬಿದ್ದಾಗ ಸಾಗರದ ಜಲವೇನೂ ಕದಡಿ ಹೋಗುವುದಿಲ್ಲ. ಈ ಉಪಮೆ ನಿನ್ನ ಮಾತಿಗೂ ನನ್ನ ಸ್ಥೈರ್ಯ ಗಾಂಭೀರ್ಯಗಳಿಗೂ ಅನ್ವಯಿಸುತ್ತದೆಂದು ಬಿಡಿಸಿ ಹೇಳಬೇಕಾದ ಆಗತ್ಯವಿಲ್ಲವೆಂದು ನಾನು ಭಾವಿಸುತ್ತೇನೆ. ಆಗಬಾರದಾಗಿದ್ದ ಸಂಗ್ರಾಮ ಪ್ರಾರಂಭವಾಗಿ ಹೋಗಿದೆ. ಆ ಮಾತು ಬೇರೆ; ಸಿಂಹದ ಕೋರೆ ಹಲ್ಲುಗಳಿಗೆ ನರಿ ಸಾಣೆ ಹಿಡಿಯ ಬೇಕಾಗಿಲ್ಲ. ಯತೋಧರ್ಮಸ್ತತೋಜಯಃ – ಧರ್ಮವೆಲ್ಲಿಹುದಲ್ಲಿ ಜಯವೆಂದು ನಾನು ಹತ್ತಾರು ಬಾರಿ ಹೇಳಿದ್ದೇನೆ. ಈ ಮಾತಿನಲ್ಲಿ ವೇದಾಂತ ಮಾತ್ರ ತುಂಬಿದೆ, ಅನುಭವ ತುಂಬಿಲ್ಲ–ವೆಂದು ನೀನು ಭಾವಿಸಿದ್ದು–ನಿನ್ನ ಸ್ವಭಾವವನ್ನು ಕಂಡವರಿಗೆ–ಆಶ್ಚರ್ಯವಾಗೇನೂ ತೋರುವುದಿಲ್ಲ. ಆದರೆ ನನ್ನ ಅಧಿಕಾರದ ಅವಧಿಯಲ್ಲಿ ಪ್ರತಿಪಕ್ಷದ ವೀರರ ತಲೆಗಳು ತರಗೆಲೆಗಳಂತೆ ಉರುಳಿ ಹೋಗುವುದನ್ನು ನೀನು ಗಮನಿಸಬಹುದು. ನನ್ನ ರುದ್ರ ಭೀಕರ ಪರಾಕ್ರಮದ ಹೊಡೆತಕ್ಕೆ ಎದುರಾಳಿಗಳು ತಲ್ಲಣಿಸಿ ಹೋಗುವುದಂತೂ ಖಂಡಿತ. ಈ ಕುರುಕುಲ ಪಿತಾಮಹ ಪ್ರತಿಜ್ಞೆಯಲ್ಲೂ ಭೀಷ್ಮನೇ–ಪರಾಕ್ರಮದಲ್ಲೂ ಭೀಷಣನೇ–ಎಂಬುದನ್ನು ನಾಳೆಯಿಂದ ಜಗತ್ತು ಕಾಣಬಹುದು. ರಾಜನಾದವನು ರಣಪ್ರಸಂಗದಲ್ಲಿ ಸೈನ್ಯಾಧಿಪತಿಗಳಿಗೆ ಯಾವ ಸಲಹೆಯನ್ನೂ – ಸೂಚನೆಯನ್ನೂ – ಕೊಡುವ ಸಾಮರ್ಥ್ಯವನ್ನು ಅಷ್ಟಾಗಿ ಪಡೆದಿರುವುದಿಲ್ಲವೆಂಬುದು ನಿನಗೆ ನೆನಪಿರುವುದು ಕ್ಷೇಮಕರವೆಂದು ನನ್ನ ಭಾವನೆ".

ಭೀಷ್ಮನ ಮಾತು ಗಂಭೀರವಾಗಿತ್ತು.

"ಪಿತಾಮಹರು ಕ್ಷಮಿಸಬೇಕು, ತಮಗೆ ನಾನು ಸೂಚನೆ ನೀಡುವಷ್ಟು ಯೋಗ್ಯತೆಯನ್ನು ಪಡೆದಿಲ್ಲ. ಕೇವಲ ನನ್ನ ಮನಸ್ಸಿನ ದುಗುಡವನ್ನು ತಮ್ಮ ಮುಂದೆ ತೋಡಿ ಕೊಂಡೆ–ಅಷ್ಟೆ. ಮೂರ್ತಿವಾನ್ ಪ್ರಳಯಂಕರೀ ಶಕ್ತಿಯಾಗಿರುವ ತಮಗೆ ನನ್ನ ಬಾಳಿನ ಭವಿಷ್ಯವನ್ನೆಲ್ಲ ಒಪ್ಪಿಸಿಬಿಟ್ಟ ಮೇಲೆ ನಾನು ನಿಶ್ಚಿಂತನಾಗಿದ್ದೇನೆ. ಈ ಯುದ್ಧದ ಪರಿಣಾಮ ಒಂದೇ–ಅದು ನನ್ನ ವಿಜಯ. ಅದು ತಮ್ಮ ಕೃಪೆಯ ಮೇಲೆ ಆಧಾರ ಪಟ್ಟಿದೆ''

''ಯಾವುದೇ ಯುದ್ಧವಾದರೂ ಅದರ ಪರಿಣಾಮ ಒಂದೇ–ವಿಜಯ. ಆದರೆ ಅದು ಯಾವ ಪಕ್ಷಕ್ಕೆಂಬುದು ದೈವೇಚ್ಛೆಗೆ ಸಂಬಂಧಪಟ್ಟದ್ದು. ಯಾರ ಕೃಪೆಗೂ ಸಂಬಂಧ ಪಟ್ಟದ್ದಲ್ಲ–ಯಾರ ಪರಾಕ್ರಮಕ್ಕೂ ಸಂಬಂಧ ಪಟ್ಟದ್ದಲ್ಲ–ಯಾರ ಛಲದ ಮೇಲೂ ಆಧಾರಪಟ್ಟಿರುವುದಿಲ್ಲ''.

–ಭೀಷ್ಮನ ಮಾತು ಬೀಸಿ ಹೊಡೆದ ಚಾಟಿ ಏಟಿನಂತಿತ್ತು. ಇಂಗಿತಜ್ಞನಾದ ದುರ್ಯೋಧನ ಏನೂ ಮಾತಾಡಲಿಲ್ಲ. ಪಿತಾಮಹರಿಗೆ ನಮಸ್ಕರಿಸಿ ತನ್ನ ಬಿಡಾರಕ್ಕೆ ಹೊರಟ.

ಗಾಂಗೇಯ ತುಂಬ ಧರ್ಮ ಸಂಕಟಕ್ಕೆ ಸಿಕ್ಕಿದ ಜೀವ. ಪರಾಕ್ರಮದ ಬಿಸಿ ತೋರಿಸಿದರೆ ಪಾಂಡವರು ಬದುಕುವಂತಿಲ್ಲ. ಇಲ್ಲವಾದರೆ ಕರ್ತವ್ಯಲೋಪ ಮಾಡಿದಂತೆ ಆರೋಪಣೆಗೆ ಗುರಿಯಾಗಬೇಕಾದೀತು. ದುಷ್ಟರನ್ನು ರಕ್ಷಿಸುವುದಕ್ಕಾಗಿ ಶಿಷ್ಟರನ್ನು ಸದೆ ಬಡಿದು ಹಾಕುವುದೇ? ಜಯಾಪಜಯಗಳೆಂಬುವು ಮಾನವನ ಕಲ್ಪನೆಯಷ್ಟೆ!! ಯುದ್ಧದಿಂದಾಗುವ ಭೀಕರ ಪರಿಣಾಮವನ್ನು ಯೋಚಿಸಿದಾಗ ವ್ಯಕ್ತಿಗತ ಜಯವೆಂಬುದು ಅದೆಷ್ಟು ಸಣ್ಣ ವಿಷಯ!! ಆದರೆ ಸಕಲ ಸೈನ್ಯಾಧ್ಯಕ್ಷನ ಅಂತರಂಗಿಕ ತುಮುಲವು ಸಮಗ್ರ ಸೈನ್ಯದ ಮೇಲೆ ಕೆಟ್ಟ ಪರಿಣಾಮ ಬೀರುವ ಸಂಭವವುಂಟಲ್ಲವೇ? ಕರ್ತವ್ಯಲೋಪವೆಂಬುದು ನಂಬಿಕೆ ದ್ರೋಹದ ಒಂದು ರೂಪತಾನೆ? ಬಾಳಿಬದುಕಿದ ಹಿರಿಯಜೀವ ಈ ಅಪಕೀರ್ತಿಗೆ ಭಾಜನವಾಗಬೇಕೆ?

–ಇಡೀ ರಾತ್ರಿ ಭೀಷ್ಮನಿಗೆ ನಿದ್ದೆ ಬರಲಿಲ್ಲ. ತಲೆ ತುಂಬ ನಾನಾ ವಿಧವಾದ ಯೋಚನೆಗಳು–ಏನೋ ಕಸಿವಿಸಿ–ಅಧಿಕಾರ ಹೆಚ್ಚಿದಷ್ಟೂ–ಅಶಾಂತಿಯೂ ಹೆಚ್ಚುತ್ತದೆ!!

ಕೌರವ ಸೇನಾಪತಿಗೆ ನಿದ್ದೆ ಬಂದರೇನು–ಬಾರದಿದ್ದರೇನು? ಇರುಳಳಿದು ಬೆಳಕಾಗಲೇಬೇಕು. ಇದು ಸೃಷ್ಟಿಯನಿಯಮ.

ತಾಳಧ್ವಜಾಲಂಕೃತ ಕನಕ ರಥವನ್ನು ಸಜ್ಜುಗೊಳಿಸಿ ಸಾರಥಿ ಆಚಾರ್ಯ ಭೀಷ್ಮರ ಬಿಡಾರದ ಮುಂದೆ ನಿಲ್ಲಿಸಿದ್ದಾನೆ. ಸೇನಾಪತಿ, ಯುದ್ಧರಂಗಕ್ಕೆ ಹೊರಡಲು ಅಣಿಮಾಡಿ ಕೊಳ್ಳುತ್ತಿದ್ದಾರೆ. ಪೂಜಿಸಲ್ಪಟ್ಟದ್ದ ರುದ್ರ ಭೀಕರ ಧನುಸ್ಸು–ಬತ್ತಳಿಕೆಗಳು, ಕವಚಗಳು – ಎಲ್ಲವನ್ನೂ ಸಿದ್ಧ ಪಡಿಸಲಾಗಿದೆ. ಭೀಷ್ಮ ತನ್ನ ಶಂಖವನ್ನು ಕೈಲಿಹಿಡಿದು ಬಿಡಾರದಿಂದ ಹೊರಕ್ಕೆ ಬಂದಿದ್ದಾನೆ. ಆತನ ಮುಖ ಮಂಡಲ ಎಂದಿನಂತೆ ಪ್ರಶಾಂತವಾಗಿದೆ. ಶ್ವೇತ ಕೇಶರಾಶಿ, ಆ ಭವ್ಯ ಮೂರ್ತಿಯ ಗೌರವವನ್ನು ಹೆಚ್ಚಿಸುವಂತಿದೆ. ದಿಗಂತದತ್ತ ಕಣ್ಣರಳಿಸಿ ನೋಡುತ್ತ ನಿಂತಿರುವ ಆತನಿಗೆ ಅದಾವ ದಿವ್ಯ ದೃಶ್ಯ ಕಾಣುತ್ತಿತ್ತೋ!!

ರಥಕ್ಕೆ ನಮಸ್ಕಾರ ಮಾಡಿದ ನಂತರ, ಸೇನಾಪತಿ, ಕುಳಿತು, ಇನ್ನು ಹೊರಡಲಿ ಎಂಬಂತೆ ಸಾರಥಿಯನ್ನು ನೋಡಿದ. ಆ ರಥದ ಹಿಂದೆ ಸಿಬ್ಬಂದಿ ವರ್ಗದವರ ರಥಗಳು ಸಾಲುಸಾಲಾಗಿ ಹೊರಟವು. ಆಕಡೆಯಿಂದ ಸರ್ಪಧ್ವಜಾಲಂಕೃತವಾದ ಕೌರವೇಶ್ವರನ ರಥ ಗಂಭೀರ ಗತಿಯಿಂದ ಹೊರಟಿತು. ಲಕ್ಷಲಕ್ಷ ಸೈನಿಕರು ಉತ್ಸಾಹದಿಂದ ಹೊರಟರು. ಚತುರಂಗ ಸೇನಾ ಪರಿವೃತನಾದ

ವಿದ್ವಾನ್ ಬ. ನ. ಗುಂಡೂರಾವ್

ಕುರುಕುಲೇಶ್ವರ ದುರ್ಯೋಧನನ ಪ್ರದೀಪ್ತ ಮುಖ ಮಂಡಲ ಆ ಮಹಾಸೈನ್ಯಕ್ಕೆ ಪ್ರೇರಕ ಶಕ್ತಿಯಾಗಿತ್ತು.

ಸಾಗರದಂತೆ ಮುನ್ನುಗ್ಗಿ ಬರುತ್ತಿದ್ದ ಕೌರವ ಸೈನ್ಯಕ್ಕೆ ಮಾರುತ್ತರ ಕೊಡುವ ಸಾಮರ್ಥ್ಯ ಪ್ರತಿಕಕ್ಷಿಗಳಲ್ಲಿರಲಿಲ್ಲವೆಂದು ಯಾರೂ ಹೇಳಲಾಗದು ಪಾಂಡವ ಪಕ್ಷದ ವೀರ ಸೇನಾನಿ ತನ್ನ ಗುಂಪಿನತ್ತ ಒಮ್ಮೆ ಹಾಗೇ ಕಣ್ಣಾರಳಿಸಿ ನೋಡಿದ ಸೂಚನೆಯಂತೆ ಸೈನ್ಯ, ಅಗ್ನಿಪರ್ವತ ಸಿಡಿದಂತೆ ಲೋಕಭೀಕರ ಲಾವಾಪ್ರವಾಹದಂತೆ–ಮುನ್ನುಗ್ಗಿತು. ಲಯೋಗ್ರಸಂಗ್ರಾಮ ಪ್ರಾರಂಭವಾದಾಗ-ಚಲದ ಸರ್ಪ ಹೆಡೆಯೆತ್ತಿದಾಗ–ದಾಯಾದಿ ಮಾತ್ಸರ್ಯ ಸಿಡಿದೆದ್ದಾಗ – ಅಸೂಯೆ ಕಿಡಿಕಾರಿ ನಿಂತಾಗ, ಪೂರ್ವದ್ವೇಷಗಳು ತಲೆಯೆತ್ತಿ ನಿಂತಾಗ-ಭುಜಬಲ ಪರಾಕ್ರಮಿಗಳ ಪೌರುಷ ಹುಚ್ಚೆದ್ದು ಕುಣಿದಾಗ–ಬಾಂಧವ್ಯದ ಸೂಕ್ಷ್ಮತಂತು ಕಿತ್ತು ಹೋಗಿ, ಶತೃತ್ವವೇ ಉರವಣಿಸಿ ಬಂದಾಗ–ಅಸ್ತ್ರ ಶಸ್ತ್ರ ಕೌಶಲ ತನ್ನ ಸಂಪೂರ್ಣ ವೇಗದಲ್ಲಿ ಮುಂಬರಿದಾಗ – ಪರಸ್ಪರ ಸೋಲಿಸುವ ಹಟ ಸೆಟೆದು ನಿಂತಾಗ – ಆ ಸರ್ವನಾಶದ ಪ್ರಳಯ ತಾಂಡವವನ್ನು ತಡೆಯಬಲ್ಲವರಾರು! ಕುರುಕ್ಷೇತ್ರದಲ್ಲಿ ರಕ್ತಧಾರೆ ಹರಿಯಲಾರಂಭವಾಯ್ತು. ಅರಿಭಟಪಾದಪಗಳುರುಳಿ ಬಿದ್ದವು, ಗಜಗಿರಿಗಳು ಧೂಳೀಪಟವಾದುವು. ಉಭಯ ಸೇನೆಗಳಲ್ಲೂ ಅಪಾರ ಪ್ರಾಣಹಾನಿಯಾಯ್ತು, ಭೀಷ್ಮರ ಪೌರುಷ ದಾವಾಗ್ನಿಯ ಮುಂದೆ, ಪಾಂಡವ ಸೈನ್ಯ ಹೇಳಹೆಸರಿಲ್ಲದೆ ನಾಶವಾಗತೊಡಗಿತು. ಪಾರ್ಥನ ರಥದ ಅಗ್ರಭಾಗದಲ್ಲಿ ಕುಳಿತಿದ್ದ ವೀರಾಗ್ರಣಿ ಮಾರುತಿ, ಭೀಷ್ಮನ ಭಯಂಕರ ಸ್ವರೂಪ ಕಂಡು ಬೆಕ್ಕಸ ಬೆರಗಾದ. ಉಭಯ ಸೈನ್ಯಗಳ ಕೋಲಾಹಲದಲ್ಲಿ–ಯಾರೊಬ್ಬರ ಮಾತೂ ಸ್ಪಷ್ಟವಾಗಿ ಕೇಳುವಂತಿರಲಿಲ್ಲ. ಗಗನಾಂಗಣದಲ್ಲಿ ಸ್ವಚ್ಛಂದವಾಗಿ ಹಾರಾಡುವ ಹಕ್ಕಿಗಳಂತೆ ಮಾರಕಾಸ್ತ್ರಗಳು ಪುಂಖಾನುಪುಂಖವಾಗಿ ಹಾರಾಡುತ್ತಿವೆ. ಶಲ್ಯನನ್ನೆದುರಿಸಿ ನಿಂತ ಸಹದೇವ–ಆಕಡೆ ದ್ರೋಣನನ್ನೆದುರಿಸಿ ನಿಂತ ಭೀಮಸೇನ, ಕೃಪಾಚಾರ್ಯನನ್ನು ಕೆಣಕಿನಿಂತ ನಕುಲ–ಧೃಷ್ಟದ್ಯುಮ್ನನ ರಥವಂತೂ ಅಲಾತ ಚಕ್ರವೇಗದಲ್ಲಿ ಎಲ್ಲೆಡೆ ಸಂಚರಿಸುತ್ತಿದೆ. ಲಕ್ಷಲಕ್ಷವಂದಿ ದಿಂಡುರುಳಿ ಬೀಳುತ್ತಿದ್ದಾರೆ. ಸಾತ್ಯಕಿಯನ್ನತ್ತ ನೂಕಿ ಬರುತ್ತಿದೆ ಭೀಷ್ಮನ ರಥ. ಅಷ್ಟರಲ್ಲಿ ಧರ್ಮಜನು ಹಾಕಿದ ಬಾಣಕ್ಕೆ ಗಾಂಗೇಯನ ಸಾರಥಿ ಛೀತ್ಕರಿಸಿ ಕೆಳಗೆ ಉರುಳಿ ಬಿದ್ದ. ಇದು ಭೀಷ್ಮನ ರೋಷಫಣಿಯನ್ನು ಕೆಣಕಿ ಕೆರಳಿಸಿದಂತಾಯ್ತು. ಆ ವೇಳೆಗೆ ಬಿಳಿಯ ಕುದುರೆಗಳು ಕಟ್ಟಿದ ರಥವೊಂದು ಆ ಕಡೆಯಿಂದ ಬಂತು. ಅದು ಬಂದ ವೇಗಕ್ಕೆ ಭೀಷ್ಮ ಒಮ್ಮೆ ಹಾಗೆ ನೋಡಿದ. ಅಷ್ಟರಲ್ಲಿ ಕೌರವ ಸೇನಾಪತಿಯ ಕೈಲಿದ್ದ ಧನುಸ್ಸು ಎರಡು ತುಂಡಾಗಿ ಬಿತ್ತು–ಮಿಂಚಿನ ವೇಗದಲ್ಲಿ ಗಾಂಗೇಯ ಬೇರೊಂದು ಧನುಸ್ಸನ್ನು ಹಿಡಿದು ನಿಂತ. ಅತನ ಪೌರುಷ ಪ್ರವಾಹ ಕಟ್ಟೆಯೊಡೆದು ಚಿಮ್ಮಿತು. ಎದುರಾಳಿಯಾಗಿ ನಿಂತವನು ಪಾರ್ಥನೆಂದ ಮೇಲೆ ಭೀಷ್ಮನ ಉತ್ಸಾಹ ಇಮ್ಮಡಿ ಯಾಯ್ತು. ಇಬ್ಬರೂ ಪರಮ ಪರಾಕ್ರಮಿಗಳು. ಇಬ್ಬರೂ ಧನುರ್ವಿದ್ಯಾವಿಶಾರದರು. ಇಬ್ಬರೂ ಸರಿಸಾಟಿ ಇಲ್ಲದ ಹಸ್ತಲಾಘವ ಹೊಂದಿದ ಲೋಕವಿಖ್ಯಾತ ಪೌರುಷ ಸಂಪನ್ನರು.

---

ೀಷ್ಮನಿಗೆ ಆಶ್ಚರ್ಯವಾಗುವ ರೀತಿಯಲ್ಲಿ ಕೃಷ್ಣ ಾರಥ್ಯ ಮಾಡುತ್ತಿದ್ದಾನೆ. ಭೀಷ್ಮನ ಗುರಿತಪ್ಪು ವಂತೆ ಚಮತ್ಕಾರವಾಗಿ ರಥನಡೆಸುತ್ತಿದ್ದಾನೆ. ಷ್ಮರಲ್ಲಿ ಆಚಾರ್ಯ ಪುತ್ರ ಅಶ್ವತ್ಥಾಮ, ಕೃಪ– ಲ್ಯ ಮುಂತಾದ ಘಟಾನುಘಟಿಗಳೆಲ್ಲ ಪಾರ್ಥನ ಥವನ್ನು ತಡೆವ ಸಲುವಾಗಿ ಮುತ್ತಿಗೆ ಹಾಕು ್ತಿದ್ದಾರೆ. ಈ ಸಾಮೂಹಿಕ ಆಕ್ರಮಣ ಕಂಡು ಜಯನ ಉತ್ಸಾಹ ನೂರುಮಡಿ ಹೆಚ್ಚಾಯ್ತು. ಕತ್ತು ಬಾಣಗಳಿಂದ ಕೃಪನ ಕುದುರೆಗಳನ್ನು ೊಂದು, ಮೂರು ಬಾಣಗಳಿಂದ ಶಲ್ಯನ ಸಾರಥಿ ಯನ್ನುರುಳಿಸಿ, ಒಂದು ಬಾಣದಿಂದ ಅಶ್ವತ್ಥಾಮನ ುದ್ರಭೀಕರ ಧನುಸ್ಸನ್ನು ಖಂಡಿಸಿ, ಭೀಷ್ಮರತ್ತ ಡೆಯಲಿ ರಥ–ಎಂದು ಅರ್ಭಟಿಸುವ ಪಾರ್ಥನ ೀರಾಲಾಪಕ್ಕೆ ಪ್ರತಿ ಪಕ್ಷದವರು ತಲ್ಲಣಿಸುತ್ತಿ ಾರೆ. ಗಾಂಗೇಯನನ್ನು ರಕ್ಷಿಸಿಕೊಳ್ಳಬೇಕಾ ದ್ದು–ಆ ಕ್ಷಣದಲ್ಲಿ ಅತಿಮುಖ್ಯವಾದ ಕಾರ್ಯವಾಗಿ ೋರುತ್ತಿದೆ. ಪಾರ್ಥನ ಪರಾಕ್ರಮದ ದಾವಾ ್ನಿಗೆ, ಪಾರ್ಥಸಾರಥಿಯ ಚಮತ್ಕಾರ ಹಾಗೂ ುನುಗ್ರಹದ ಗಾಳಿ ಬೀಸುತ್ತಿದೆ – ಇರಲಿ–ಇದಕ್ಕೆ ಿದ್ಧರೆಯುತ್ತೇನೆಂದು ಕ್ಷಣಮಾತ್ರ ಯೋಚಿಸಿದ ಾಂಗೇಯ ಹರಿಯ ಸಿರಿಯೊಡಲ ಮೇಲೆ ಸರ ನ ಸುರಿಮಳೆಗರೆಯಲಾರಂಭಿಸಿದ. ಕೌರವ ೇನಾಧ್ಯಕ್ಷನ ಗಮನ ರಥಿಯ ಮೇಲಲ್ಲ–ಸಾರ ಿಯ ಮೇಲೆ ಕೇಂದ್ರೀಕೃತವಾಯ್ತು. ಅರ್ಜುನನ ಾಹಸವೆಲ್ಲ ಪಿತಾಮಹನ ಮುಂದೆ ವ್ಯರ್ಥವಾ ುತ್ತಿದೆ. ಕಾಲಯಮನೊ ಭೀಷ್ಮನೊ–ಎಂಬ ಂದೇಹವಾವರಿಸುತ್ತಿದೆ. ಪಾರ್ಥನ ರಥದ ಳಿಯ ಕುದುರೆಗಳು ಜರ್ಝರಿತವಾಗಿ ಕೆಂಬ ್ಣಕ್ಕೆ ತಿರುಗಿವೆ. ರಥದ ಗಾಲಿಗಳ ಮಟ್ಟವನ್ನೂ ೇರಿ ರಕ್ತಧಾರೆ, ರಥದೊಳಕ್ಕೆ ನುಗ್ಗುತ್ತಿದೆ. ೀಷ್ಮನ ಭೀಮ ಬಾಹುಗಳಲ್ಲಿ ಅದಾವ ಭೀಕರ ಕ್ತಿ ಸಂಚಾರವಾಯ್ತೋ!! ಆತನ ಕೈಲಿದ್ದ ನಸ್ಸು ಖಂಡಿಸಲು ಪಾರ್ಥ ವಿಶ್ವಪ್ರಯತ್ನ ಾಡುತ್ತಿದ್ದಾನೆ. ಆದರದು ಸಾಧ್ಯವಾಗುತ್ತಿಲ್ಲ. ಷ್ಟರಲ್ಲಿ ಗಾಂಗೇಯ ಗುರಿನೋಡಿ ಎರಡು ಕ್ರೂರ ಾರಾಚಗಳನ್ನು ಪ್ರಯೋಗಿಸಿದ–ಅವು ನೀಲ ೇಘಶ್ಯಾಮಕೃಷ್ಣನ ಹಣೆಯಲ್ಲಿ ನೆಟ್ಟುಹೋದವು! ೀಲಮಣಿವಿಗ್ರಹ ಕ್ಷಣಾರ್ಧದಲ್ಲಿ ರಕ್ತ ರಂಜಿತ ಾಯ್ತು. ಕೃಷ್ಣನಿಗೆ ಸಿಟ್ಟು ಬಂತು. ಕೆಂಪು ಾರಿದುವಾಲಿಗಳು, ರೋಷದ ಬಿಂಪಿನೊಳು ್ರಕಂಪಿಸಿತು, ಸೊಂಪುಗೆಟ್ಟದು ಸಿರಿವದನ, ಂಟಿಕ್ಕಿದನು ಹುಬ್ಬುಗಳ–ಅರ್ಜುನನನ್ನು ತಿರ ್ಕಾರವಾಗಿ ನೋಡಿದ ಕೃಷ್ಣ–ಬಿಸುಟುಕಳೆದನು ಯದ ವಾಘೆಗಳ. ರಥದಿಂದ ಧುಮುಕಿದ ವೇಗಕ್ಕೆ ರಿ ನಡುಗಿತು. ಆತನ ಕರ್ಣ ಕುಂಡಲಗಳ ಕಾಂತಿ ಗನ ಭಾಗದಲ್ಲೆಲ್ಲ ಆವರಿಸಿತು. ಉತ್ತರೀಯ ಾಳಿಗೆ ಹಾರಿ ಹೋಗುತ್ತಿದೆ – ಲೋಕರಕ್ಷಾಮಣಿ ಾದ ಪಾರ್ಥಸಾರಥಿ ಭೀಷ್ಮನ ಕಡೆ ಬಿರುಗಾಳಿ ಯಂತೆ ನುಗ್ಗುತ್ತಿದ್ದಾನೆ. ತಾನು ಯುದ್ಧದಲ್ಲಿ ಆಯುಧವನ್ನು ಹಿಡಿಯುವುದಿಲ್ಲವೆಂದು ಹಿಂದೊಮ್ಮೆ ಆಡಿದ್ದ ಮಾತು–ಮಾಡಿದ್ದ ಪ್ರತಿ ಜ್ಞೆಯೂ ಮರೆತು ಹೋದಂತಿದೆ. ಆ ಪ್ರಳಯೋಗ್ರ ಶಕ್ತಿಯ ಮುಂದೆ ಯಾರು ತಾನೆ ನಿಲ್ಲಬಲ್ಲರು!! ಕಾಲುಹಿಡಿದು ಬೇಡುತ್ತಿರುವ ಪಾರ್ಥನನ್ನೂ ದರ ದರನೆಳೆದುಕೊಂಡೇ ಹೊಗುತ್ತಿದ್ದಾನೆ ಕೃಷ್ಣ. ಇದಾವ ರಭಸ–ಇದೆತ್ತಣ ರೋಷ!! ಸುದರ್ಶನ ಚಕ್ರ ಆತನ ಕೈಗೆ ಬಂದಿದೆ. ಕಾಪಾಡುವ ಕೈ ಕೊಲ್ಲುವ ಪ್ರತಿಜ್ಞೆ ಮಾಡುತ್ತಿದೆ; ಶತ್ರುಪಕ್ಷದ ಸೈನ್ಯಾಧಿಪತಿಯನ್ನು ಕಡಿದುರುಳಿಸುವ ರೋಷವೋ–ತನ್ನವರ ಕೈಹಿಡಿದು ರಕ್ಷಿಸ ಬೇಕೆಂಬ ಅಭಿಮಾನವೋ!! ತನಗೆ ಬಿದ್ದ ಪೆಟ್ಟಿಗೆ ಪ್ರತಿಕಾರ ಮಾಡುವ ಚಲವೋ!! ಸುಡುವೆನ ಹಿತಾನ್ವಯವ– ಭೀಷ್ಮನ ಕಡಿದು ಭೂತಗಣಕ್ಕೆ ಬೋನವನಿಕ್ಕುವೆನು ಮೇಳವೇನನ್ನೊಡನೆ?–ಎನ್ನುತ್ತಿದ್ದಾನೆ ಪಾರ್ಥ ಸಾರಥಿ. ಕೌರವರ ಗುಂಪು ಈ ಮಾತು ಕೇಳಿ ತಲ್ಲಣಿಸಿ ಹೊಗಿದೆ. ಜಗತ್ಪ್ರಳಯವೇ ಸನ್ನಿಹಿತ ವಾದಂತೆ ಸಮಗ್ರ ಕುರುಕ್ಷೇತ್ರ ರಣರಂಗ ಗರಬಡಿ ದಂತೆ ಬೆಪ್ಪಾಗಿ ನೋಡುತ್ತಿದೆ. ಸಮರ ಸರ್ವಜ್ಞರು ಗಳು ಗಡಗಡ ನಡುಗಿ ಹೋಗಿದ್ದಾರೆ.

ಚಕ್ರಧಾರಿಯಾದ ಕೃಷ್ಣ ಮಿಂಚಿನ ವೇಗದಲ್ಲಿ ಸಾರುತ್ತಿದ್ದಾನೆ – ಮೃತ್ಯುದೇವತೆಯಂತೆ ಬರುತ್ತಿ ದ್ದಾನೆ–ಭೀಷ್ಮನ ಮೇಲೆ ಉರವಣಿಸಿ ಬರುತ್ತಿ ದ್ದಾನೆ. ಲೋಕ ಭೀಕರವಾದ ಆ ಚಕ್ರಾಯುಧದ ಪೆಟ್ಟಿಗೆ ಗಾಂಗೇಯನ ತಲೆ ಇನ್ನೇನು ಗಗನಕ್ಕೆ ಹಾರೀತು–ಇದು ಸುನಿಶ್ಚಿತವೆಂದು ಲಕ್ಷಲಕ್ಷ ಮಂದಿ ಭಯಚಕಿತರಾಗಿದ್ದಾರೆ. ಆದರೆ ಆ ವಿಷಮ ಸನ್ನಿವೇಶದಲ್ಲಿ ಎಳ್ಳಷ್ಟು ಗಾಬರಿಯಾಗದೆ ಶಾಂತ ವಾಗಿದ್ದವನೆಂದರೆ–ಶಾಂತನವ ಭೀಷ್ಮನೊಬ್ಬನೆ!! ಸ್ಥೈರ್ಯೇಣ ಹಿಮವಾನಿವ–ಎಂಬ ಮಾತಿಗೆ ಇದ ಕ್ಕಿಂತ ಬೇರೆ ನಿದರ್ಶನ ಇನ್ನೆಲ್ಲೂ ಸಿಕ್ಕಲಾರದು. ಇಂತಹ ಭೀಕರ ಪರಿಸ್ಥಿತಿಯಲ್ಲಿ ಗಾಂಗೇಯರಿಗೆ ಆ ಸ್ಥೈರ್ಯ ಹೇಗೆ ಬಂತು? ಮೃತ್ಯು ದೇವ ತೆಯನ್ನು ಕಂಡಾಗಲೂ ಆತ ಶಾಂತ ವಾಗಿದ್ದುದು ಹೇಗೆ? ಭೀಷ್ಮ ಕೃತ ಕೃತ್ಯಜೀವ. ಕೃತಕೃತ್ಯನಾದವನು ಮೃತ್ಯುವನ್ನು ಪ್ರಿಯ ಅತಿಥಿಯಂತೆ ಭಾವಿಸುತ್ತಾನೆ. ಮೇಲಾಗಿ ಗಾಂಗೇಯರು ಕೃಷ್ಣ ಭಕ್ತರು. ಲಯೋಗ್ರಮೂರ್ತಿ ಯಾದ ನೃಸಿಂಹನನ್ನು ಕಂಡು ಪ್ರಹ್ಲಾದ ಹೆದ ರಿದನೇನು! ಭೀಷ್ಮರೂ ಅಷ್ಟೆ–ಚಕ್ರಧಾರಿಯ ಕೋಪಕ್ಕೆ ಹೆದರುವವರಲ್ಲ. ಧನುರ್ಬಾಣಗಳನ್ನತ್ತ ಬಿಸುಟು ಕೃಷ್ಣನ ಮುಂದೆ ಕೈಮುಗಿದು ನಿಂತರು– ಹರಿ ಮುಕುಂದ ಯಾದವಾಗ್ರಣಿ ಭಕ್ತವತ್ಸಲ ನಮೋನ್ನಮಃ–ಎಂದರು. ಕಂದನ ಮೇಲೆ ತಾಯಿ ಎಷ್ಟೇ ಸಿಟ್ಟುಮಾಡಿಕೊಂಡರೂ ಆಕೆಯೇ ಮಗ ನನ್ನು ಕಾಪಾಡುವ ದಯಾಮಯಿಯಲ್ಲವೇ? ನಿನ್ನ ರೋಷವನ್ನು ಎದುರಿಸುವ ಸಾಮರ್ಥ್ಯ ನನ ಗುಂಟೆ. ಮಾರಥ್ಯಂಸಿ? ಗುಬ್ಬಿಯ ಮೇಲೆ ಬ್ರಹ್ಮಾ ಸ್ತ್ರಪ್ರಯೋಗಮಾಡಿದರೆ ಲೊಕ ಹಾಸ್ಯಮಾಡುವು ದಿಲ್ಲವೆ ದಯಾಜಲಧಿ? ರೋಮರೋಮದೊಳ ಖಿಲ ಭುವನಸ್ತೋಮ ನಲಿದಾಡುವುದುಗಡ. ನೀನು ನನ್ನಮೇಲೆ ಕೋಪಗೊಂಡು ಚಕ್ರಹಿಡಿದರೆ ದೇವರ್ಷಿಗಳು ನಗದೆ ಇರುತ್ತಾರೆಯೆ? ಮೇಲಾಗಿ–ನನಗೆ ಇಚ್ಛಾಮರಣದ ವರವಿದೆ ಯೆಂದು ಸರ್ವಜ್ಞನಾದ ನಿನಗೆ ತಿಳಿಯದೇ ವಾಸುದೇವ! ನಿನ್ನ ಕೃಪೆಯೇ ನನಗೆ ರಕ್ಷಾಕವಚ ವಾಗಿರುವಾಗ ನಿನ್ನ ಚಕ್ರಾಯುಧವೇನು ಮಾಡೀತು!

–ಭೀಷ್ಮನ ಮಾತಿನಲ್ಲಿ ಹಾಸ್ಯದ ಅಂಶದ ಜತೆಗೆ ಸುದೃಢ ನಂಬಿಕೆಯ ಅಂಶ ಇಣುಕಿನೊಡುತ್ತಿತ್ತು. ಆತನು ಲೋಕಪೂಜ್ಯನಾದ ಕೃಷ್ಣನ ವಿವಿಧ ರೂಪಗಳನ್ನು ಕಂಡವನು. ಪಾಂಡವರ ರಾಜ ಸೂಯಾಧ್ವರದಲ್ಲಿ ಶಿಶುಪಾಲನ ಬಿರುನುಡಿಗಳ ನ್ನಾಲಿಸುತ್ತ ಜ್ವಾಲಾಮುಖಿಯಂತೆ ಸುಮ್ಮನೆ ಕುಳಿತಿದ್ದ ಗಂಭೀರ ರೂಪವನ್ನು ನೋಡಿದ್ದಾನೆ. ಸಹಸ್ರ ಸಹಸ್ರ ಜನರ ಮುಂದೆ–ಋಷಿಮುನಿಗಳ ಸಮಕ್ಷಮದಲ್ಲಿ ರತ್ನ ಸಿಂಹಾಸನದಲ್ಲಿ ಕುಳಿತು ಧರ್ಮರಾಜಾದಿಗಳು ಸಲ್ಲಿಸಿದ ಅಗ್ರಪೂಜೆಯನ್ನು ಕೈಗೊಂಡ ಭವ್ಯರೂಪವನ್ನು ಕಂಡಿದ್ದಾನೆ. ಕೌರವನಾಸ್ಥಾನದಲ್ಲಿ ಸಂಧಾನಕ್ಕಾಗಿ ಬಂದಾಗ ಆತನ ಶ್ರೀಮುಖೋದ್ಭವೆಯಾದ ನೀತಿಧರ್ಮವಾಹಿನಿ ಪಾದೋದ್ಭವೆಯಾದ ತನ್ನ ತಾಯಿಯಂತೆಯೇ ಗಂಭೀರವಾಗಿ ಪ್ರವಹಿಸಿದ್ದನ್ನು ಕಂಡಿದ್ದಾನೆ.ವಿದುರ ನಾತಿಥ್ಯವನ್ನು ಸ್ವೀಕರಿಸಿದ ಕರುಣಾಮೂರ್ತಿ ಯನ್ನು ಕಂಡಿದ್ದಾನೆ. ಕುರುಕ್ಷೇತ್ರದಲ್ಲಿ ಚಕ್ರಧಾ ಯಾಗಿ ಉರವಣಿಸಿ ಬಂದ ರೋಷಮೂರ್ತಿಯನ್ನು ನೋಡುತ್ತಿದ್ದಾನೆ. 'ನಿನ್ನ ಪ್ರತಿಜ್ಞೆಯನ್ನು ಮರೆತು ಆಯುಧ ಧರಿಸಿದೆಯಲ್ಲವೇ? ಧರಿಸುವಂತೆ ಮಾಡಿದೆನಲ್ಲವೇ?–ಅದೇ ನನ್ನ ಪೌರುಷ–ನೀನೆನ ಗಿತ್ತ ಪೌರುಷ'–ಎಂಬ ಭಾವ ಗಾಂಗೇಯನ ಕಣ್ಣುಗಳಲ್ಲಿ ಮಿಂಚುತ್ತಿದೆ.

ಕೌರವ ಸೇನಾಪತಿಯ ಮಾತಿನ ವರಸೆಗೂ– ಅನನ್ಯಭಕ್ತಿಗೂ ಭಕ್ತಪರಾಧೀನ ಕರಗಿಹೋದ ತನ್ನ ಕೋಪವನ್ನು ಪಸಂಹರಿಸಿಕೊಂಡ. ಈ ನೆಪ ದಲ್ಲಿ ಸಾಧಕ ಶ್ರೇಷ್ಠನಾದ ಗಾಂಗೇಯನಿಗೆ ದಿವ್ಯ ದರ್ಶನದ ಲಾಭ ದೊರೆಯಿತು. ಬಿರುಗಾಳಿ ಕ್ಷಣ ಮಾತ್ರದಲ್ಲಿ ತಂಗಾಳಿಯಾಗಿ ಹೋಯ್ತು. ಕೃಷ್ಣನ ಆಶುಕೋಪ ಆಶುತೋಷ – ಎರಡನ್ನೂ ಕಂಡ ಆಚಾರ್ಯ ಭೀಷ್ಮ ಧನ್ಯನಾದ–ಚರಿತಾರ್ಥನಾದ ಮುಕುಂದನ ಮುಖದಲ್ಲಿ ಮತ್ತೊಮ್ಮೆ ಮುಗುಳು ನಗೆ ಲಾಸ್ಯವಾಡಿತು. ★

## ತಿರುಮಲೆ ತಿರುಪತಿ ದೇವಸ್ಥಾನಗಳು

# ದಾನಯೋಜನೆಯಲ್ಲಿ ಯಾತ್ರಿಕವಸತಿಗೃಹಗಳು

ತಿರುಮಲೆಯಲ್ಲಿ ನಿರಂತರ ಹೆಚ್ಚುತ್ತಿರುವ ಯಾತ್ರಿಕರ ಅನುಕೂಲಗಳಿಗಾಗಿ ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತವು ಹೆಚ್ಚಿನ ವಸತಿ ಸೌಕರ್ಯವನ್ನು ಒದಗಿಸಲು ತೀರ್ಮಾನಿಸಿದೆ. ಈ ಬೃಹತ್ ಕಾರ್ಯವನ್ನು ಭಕ್ತರ ಹಾಗೂ ಸೇವಾಕರ್ತರ ಸಕ್ರಿಯ ಸಹಕಾರದಿಂದ ನೆರವೇರಿಸಲು ತಿ.ತಿ.ದೇ. ನಿರ್ಧರಿಸಿದೆ

ಈ ಯೋಜನೆಯ ವಿವರಗಳನ್ನು ಆಸಕ್ತರಿಗಾಗಿ ಈ ಕೆಳಗಿನಂತೆ ನಿರೂಪಿಸಲಾಗಿದೆ.

### ಗರುಡಾದ್ರಿನಗರ ವಸತಿಯೋಜನೆ

ಈ ಯೋಜನೆಯನ್ವಯ ಎರಡು ಅಂತಸ್ತುಗಳ 16 ವಸತಿಗೃಹಗಳನ್ನು (ಪ್ರತಿಯೊಂದು ಅಂತಸ್ತಿನಲ್ಲಿ 4 ಸೂಟ್‌ಗಳಿರುವಂತೆ) ನಿರ್ಮಿಸಲಾಗುವುದು. ಪ್ರತಿಯೊಂದು ಸೂಟ್ ಸಹ 10' x 12' ಗಳಿದ್ದು ಸ್ನಾನ ಶೌಚಾಗಾರಗಳೊಂದಿಗೆ ಹಾಗೂ ಸಾಮಾನ್ಯ ಅಂಗಳದೊಂದಿಗೆ ಕೂಡಿರುವುದು.

ಒಟ್ಟು 320 ಚದರಡಿ ಪ್ಲಿಂತ್ ವಿಸ್ತೀರ್ಣದ ಪ್ರತಿಸೂಟ್‌ಗಾಗಿ ದಾನ ನೀಡಬೇಕಾದ ಮೊಬಲಗು ರೂ 30,000 ಮಾತ್ರ.

ಒಟ್ಟು 128 ಸೂಟ್‌ಗಳಿರುವ ಈ ಯೋಜನೆಯಲ್ಲಿ ಆಸಕ್ತ ಭಕ್ತರು ಈಗಾಗಲೇ 66 ಸೂಟ್‌ಗಳಿಗಾಗಿ ದಾನಗಳನ್ನು ನೀಡಿದ್ದಾರೆ!

8 ಸೂಟ್‌ಗಳ ಒಂದು ವಸತಿಗೃಹದ ವೆಚ್ಚವಾದ 2.4 ಲಕ್ಷ ರೂಗಳನ್ನಾಗಲೀ, 4 ಸೂಟ್‌ಗಳ ವೆಚ್ಚವಾದ 1.2 ಲಕ್ಷ ರೂಗಳನ್ನಾಗಲೀ ಅಥವಾ ಎರಡು ಸೂಟ್‌ಗಳ ವೆಚ್ಚವಾದ ರೂ 60,000 ಗಳನ್ನಾಗಲೀ ನೀವು ದಾನ ನೀಡಬಹುದು.

### ರಾಮಬಗೀಚಾ ಅತಿಥಿಗೃಹ ಯೋಜನೆ

ತಿರುಮಲೆಯ ದೇವಾಲಯದ ಈಶಾನ್ಯ ಭಾಗದಲ್ಲಿನ ರಾಮ ಬಗೀಚಾದಲ್ಲಿ ಮೂರು ಅತಿಥಿ ಗೃಹಗಳನು ನಿರ್ಮಿಸಲು ತೀರ್ಮಾನಿಸಲಾಗಿದೆ.

ಪ್ರತಿಯೊಂದು ಅತಿಥಿಗೃಹವೂ ಮೂರು ಅಂತಸ್ತುಗಳನ್ನು ಹೊಂದಿದ್ದು, ಪ್ರತಿ ಅಂತಸ್ತಿನಲ್ಲಿ 50 ಸೂಟ್‌ಗಳಿರುತ್ತವೆ. ಪ್ರತಿಯೊಂದು ಸೂಟ್ 14' x 16' ವಿಸ್ತೀರ್ಣವಿದ್ದು ಸ್ನಾನ ಶೌಚ ಗೃಹಗಳು ಇರುತ್ತವೆ. ಪ್ಲಿಂತ್ ವಿಸ್ತೀರ್ಣ ಸುಮಾರು 600 ಚ. ಅಡಿಗಳಾಗಿದ್ದು ಸಾಮಾನ್ಯ ಅಂಗಳವಿರುವುದು. ಪ್ರತಿ ಸೂಟ್‌ನ ನಿರ್ಮಾಣಕ್ಕೆ ತಗಲುವ ದಾನದ ಮೊಬಲಗು ರೂ 60,000 ಮಾತ್ರ.

ತೀರ್ಮಾನಿಸಲಾದ 450 ಸೂಟ್‌ಗಳಲ್ಲಿ ಈಗಾಗಲೇ 37 ಸೂಟ್‌ಗಳಿಗಾಗಿ ದಾನಗಳನ್ನು ಸ್ವೀಕರಿಸಲಾಗಿದೆ!

### ನಿಮ್ಮ ದಾನದ ಪ್ರತಿಯಾಗಿ ದೊರೆಯುವ ಸೌಲಭ್ಯಗಳು ಈ ರೀತಿ ಇವೆ

1. ದಾನಿಗಳ ಹೆಸರಿನ ಫಲಕವನ್ನು ಕಟ್ಟಡದಲ್ಲಿ ಸ್ಥಾಪಿಸಲಾಗುವುದು
2. ಒಂದು ಬಾರಿಗೆ ಹತ್ತು ದಿನಗಳಿಗೆ ಮೀರದಂತೆ ದಾನಿಯು ಒಂದು ವರ್ಷದಲ್ಲಿ 60 ದಿನಗಳ ಕಾಲ ಉಚಿತವಾಗಿ ತಮ್ಮ ದಾನದ ಕಟ್ಟಡದಲ್ಲಿ ತಂಗಬಹುದು.
3. ದಾನಿಯ ಬಂಧುಗಳಿಗೆ ತಿರುಮಲೆಯಲ್ಲಿ ವಸತಿ ನೀಡುವಲ್ಲಿ ಆದ್ಯತೆ ನೀಡಲಾಗುವುದು.
4. ಅಪೇಕ್ಷಿಸಿದಾಗ ದಾನಿಯ ಕಟ್ಟಡ ಖಾಲಿಯಿಲ್ಲದಲ್ಲಿ ಇತರ ಏರ್ಪಾಡುಗಳನ್ನು ಮಾಡಿಕೊಡಲಾಗುವುದು.

ಕೂಡಲೇ ಬರೆಯಿರಿ – ಕಾರ್ಯನಿರ್ವಹಣಾಧಿಕಾರಿ
ತಿ. ತಿ. ದೇ. ತಿರುಪತಿ

## ಪುಸ್ತಕ ಪರಿಚಯ

# ವೇಲಾಪುರ ಮಹಾತ್ಮ್ಯೆ

ನಮ್ಮಲ್ಲಿ ತೀರ್ಥಕ್ಷೇತ್ರಗಳೂ ಪುಣ್ಯಕ್ಷೇತ್ರಗಳೂ ಹಲವಾರು. ಇವುಗಳ ಕೀರ್ತಿ ಪಾವಿತ್ರ್ಯಗಳ ಕಥೆಗಳೂ ನೂರಾರು, ಈ ಕಥೆಗಳು ಪೌರಾಣಿಕ ತಳಹದಿಯ ಮೇಲೇರಿದ ಭವ್ಯ ಮಹಲುಗಳು, ಭಕ್ತರ ಕಣ್ಣು ಬಾಯಿಗಳನ್ನು ತೆರೆಯಿಸುತ್ತವೆ. ನಿಜವಾಗಿ ಉತ್ತಮವಾಗಿರುವ ಒಂದು ಕ್ಷೇತ್ರಕ್ಕೆ ಇಂತಹ ಕಥೆಗಳ ವೈಭವೀಕರಣ ಅವಶ್ಯವಿಲ್ಲ. ಆದರೂ ಇದು ನಮ್ಮ ದೇಶದ ಸಂಪ್ರದಾಯ. ಈ ಸ್ಥಳಪುರಾಣಗಳೇ ಜನರ ಬಾಯಿಂದ ಬಾಯಿಗೆ ಹರಿದು ಯಕ್ಷಗಾನ, ನೃತ್ಯ, ಮಹಾಕಾವ್ಯಾದಿಗಳಿಗೆ ವಸ್ತುವಾಗಬಹುದು. ಪ್ರಾಚೀನ ಮಹಾಕಾವ್ಯಗಳೆಂದರೆ ಇಂತಹ ಕಥೆಗಳ ಲಿಖಿತ ರೂಪವೇ ಅಲ್ಲವೇ? ರಾಮಾಯಣ, ಮಹಾಭಾರತ, ಫಿನ್‌ಲೇಂಡಿನ 'ಕಲೆವಾಲ'ಗಳೂ ಇಂತಹವೇ.

ಕೆಲವೊಮ್ಮೆ ಇಂತಹ ಸ್ಥಳಪುರಾಣ, ಜನಪದ ಕಥೆಗಳಲ್ಲಿ ಸಣ್ಣ ವಸ್ತು ಸತ್ಯ ಅಡಗಿದ್ದು ಚಿಕ್ಕದಾದ ಬಲಿಮೂರ್ತಿ, ಅಟ್ಟೆ ಅಲಂಕಾರಗಳಿಂದ ಮರೆಯಾಗುವಂತೆ ಅಗೋಚರವಾಗಿರುತ್ತದೆ. ಐತಿಹಾಸಿಕ ಸತ್ಯ ತೆಳು ಪರದೆಯ ಹಿಂದೆ ಅಸ್ಪಷ್ಟವಾಗಿರುವಂತೆ ತೋರುತ್ತದೆ. ಇವುಗಳನ್ನು ಬಗೆದು ನೋಡಿದರೆ ಅಲ್ಪ ಸ್ವಲ್ಪ ಸತ್ಯದ ರಸ ಒಸರಲೂ ಬಹುದು, ಅಥವಾ ವಸ್ತು ಸತ್ಯದ ಊಹೆಗೆ ಅವಕಾಶ ಸಿಗಲೂ ಬಹುದು. ಮುಗ್ಧ ಭಕ್ತರಿಗೆ ಇಂಥಹವು ಅದ್ಭುತ ಅನುಭವದ ರಂಜನೆಯನ್ನು ನೀಡುವುವು.

ಸ್ಕಾಂದ ಪುರಾಣವು ಹಲವಾರು ಕಥೆಗಳ ಆಗರ. ಇದರಲ್ಲಿ ಹಲವಾರು ಸ್ಥಳಪುರಾಣಗಳೂ ಬರುತ್ತವೆ. 'ವೇಲಾಪುರ ಮಾಹಾತ್ಮ್ಯೆ'ವು ಸ್ಕಾಂದಪುರಾಣದ ಹೆಸರಿನಲ್ಲಿ ಪ್ರತ್ಯೇಕವಾಗಿ ಹಸ್ತಪ್ರತಿ ರೂಪದಲ್ಲಿ ದೊರೆತ ಸ್ಥಳಪುರಾಣ. ಇದು ಈ ತನಕ ಪ್ರಕಟವಾಗಿದೆಯೋ ಎಂಬುದು ತಿಳಿಯದು. ತೊಂಬತ್ತೆಂಟು ವರ್ಷ ಹಳತಾದ ಈ ಪ್ರತಿಯ ಮೂಲ ಕೃತಿ ಪ್ರಾಚೀನ.

'ವೇಲಾಪುರ ಮಾಹಾತ್ಮ್ಯೆ'ವು ಸಂಸ್ಕೃತ ಭಾಷೆಯಲ್ಲಿ ಕನ್ನಡ ಲಿಪಿಯಲ್ಲಿ ಹೆಚ್ಚಾಗಿ ಅನುಷ್ಟುಪ್ ಶ್ಲೋಕಗಳಲ್ಲ, ಹಿಂಬತ್ತು ಅಧ್ಯಾಯ–ಸುಮಾರು ಮುನ್ನೂರೈವತ್ತು ಶ್ಲೋಕಗಳಲ್ಲಿರುವ ಒಂದು ಪುಟ್ಟ ಕೃತಿ. ಕನ್ನಡದ ಈಗಿನ ಲಿಪಿಯನ್ನು ಹೋಲುತ್ತದೆ. ದೀರ್ಘ ಚಿಹ್ನೆ 'ೀ' ಇಲ್ಲದೆ ಕೇವಲ ತಲೆಕೊಟ್ಟಿನ ಸುಳಿಯಿಂದಲೇ ದೀರ್ಘಸೂಚನೆ. ಬರವಣಿಗೆ ಅಲ್ಲಲ್ಲಿ ತ್ರುಟಿತವಾಗಿದೆ. ಗೆದ್ದಲು ರುಚಿ ನೋಡಿದ್ದು ಮಾತ್ರವಲ್ಲದೆ ಲಿಪಿಕಾರ ಸ್ಖಾಲಿತ್ಯದಿಂದಾಗಿರಬಹುದು. ಕುಂಬಳೆ ಸೀಮೆಗೆ ಸಂಬಂಧಿಸಿದ ಕೆಲವು ಸ್ಥಳಗಳ ಹೆಸರು ಪ್ರಾಸಂಗಿಕವಾಗಿ ಬರುತ್ತವೆ. ಕುಮಾರಮಂಗಲ, ಮಂಜುಳಾಖ್ಯಪುರ (ಮಂಜೇಶ್ವರ), ಬಡಜೆ, ಪಯಸ್ವಿನಿ, ವೇಲಾಪುರ ಇತ್ಯಾದಿ. ಕವಿಸಿಂಹನೆಂಬ ರಾಜನ ಕಥೆ, ವೇಲಾಪುರದ ಮಹಿಷಾಸುರ ಮರ್ದಿನಿಯ ಮಹಾತ್ಮ್ಯೆ ಇದರ ವಸ್ತು. ಸುಲಭವಾದ ಸಂಸ್ಕೃತ ಶೈಲಿಯಲ್ಲಿ ಕಥೆ ಓಡುತ್ತದೆ. ಸರಳವಾದ ಶಬ್ದಾಲಂಕಾರ ಅರ್ಥಾಲಂಕಾರಗಳಿಂದ ಕೃತಿಯು ರೋಚಕವಾಗಿದೆ. ಉದಾ: "ಇಂದೀವರ ಪ್ರತಿಮ ಸುಂದರಮಿಂದಿರೇಶಂ ಆನಂದಕಂದಳವ ನಿಂದಿತ ಸುಂದರಾಂಗಂ" ಶೌನಕಸೂತರ ಸಂಭಾಷಣೆಯ ರೂಪದಲ್ಲಿ ಕಥೆ ಸಾಗುತ್ತದೆ.

ಮಂಗಳೂರು – ಕಾಸರಗೋಡು ರಾಷ್ಟ್ರೀಯ ಹೆದ್ದಾರಿ. ಎನ್. ಎಚ್. 17 ರಲ್ಲಿ ಉಪ್ಪಳದಿಂದ ಸ್ವಲ್ಪವೇ ಮುಂದೆ ಪಶ್ಚಿಮಕ್ಕೊಂದು ಮಣ್ಣ ರಸ್ತೆ ತಿರುಗುತ್ತದೆ. ಅಲ್ಲೇ ಕಮಾನು ಎದುರುಗೊಳ್ಳುವುದು. ಈ ರಸ್ತೆಯಲ್ಲಿ ಸುಮಾರು ಒಂದು ಮೈಲು ಪಶ್ಚಿಮಕ್ಕೆ ಮಹಿಷಾಸುರಮರ್ದಿನೀ ದೇವಾಲಯ. ಇಲ್ಲಿಗೆ ಈಗ 'ಐಲ' ಎಂದು ಹೆಸರು. ಇದೇ ವೇಲಾಪುರವಾಗಿರಬೇಕು. ಈ ದೇವಿಯ ಮಹಾತ್ಮೆಯನ್ನು ಸಾರುವ ಈ ಗ್ರಂಥದಲ್ಲಿ ಇದರ ಪ್ರತಿಷ್ಠಾಪನೆಗೆ ಕಾರಣನಾದ ಕುಂಬಳೆರಾಜ ಕವಿಸಿಂಹನ ಕಥೆಯೂ ಇದೆ, ಸಾಧಾರಣ ಪೌರಾಣಿಕ ಧಾಟಿಯಲ್ಲಿ ಕಥೆಯ ಆರಂಭ–

ನೈಮಿಷಾರಣ್ಯದಲ್ಲಿ ಶೌನಕಾದಿ ಮುನಿಗಳು ಸೂತಮಹರ್ಷಿಯಲ್ಲಿ 'ನೇತ್ರಾವತಿಯ ದಕ್ಷಿಣಕ್ಕಿರುವ ವೇಲಾಖ್ಯಕ್ಷೇತ್ರದಲ್ಲಿ ಮಹಿಷ ಮರ್ದಿನಿಯನ್ನು ಸ್ಥಾಪಿಸಿದವರಾರು ನಮಗೆ ತಿಳಿಸು'-ಎಂದು ಕೇಳುವಾಗ ಸೂತ ಮಹರ್ಷಿಗಳು ಹೇಳುತ್ತಾರೆ–"ಭಾಸ್ಕರ ವಂಶದಲ್ಲಿ ಮಯೂರವರ್ಮನೆಂಬ ರಾಜನಿದ್ದನು. ಅವನು ಶಂಭುವನ್ನಾರಾಧಿಸಿ ಸಕಲವಿದ್ಯಾ ಪಾರಂಗತನಾದನು, ಬ್ರಾಹ್ಮಣರನ್ನು ನೆಲೆಗೊಳಿಸಿದನು. ಅವನ ಮಗ ಚಂದ್ರಾಂಗದ. ಅವನಿಗೆ ವೀರವರ್ಮನೆಂಬ ಮಗ, ಸುಶೀಲಾ ಎಂಬ ಮಗಳು. ಚಂದ್ರಾಂಗದನು ತನ್ನವರೊಂದಿಗೆ ದಕ್ಷಿಣದ ಅನಂತಶಯನ, ಕನ್ಯಾಕುಮಾರಿವರೆಗಿನ ತೀರ್ಥಕ್ಷೇತ್ರಗಳನ್ನೆಲ್ಲಾ ವೀಕ್ಷಿಸಿ ಹಿಂತಿರುಗಿ ಪಯಸ್ವಿನೀ ನದಿಯನ್ನು ದಾಟಿ ಕಣ್ವಪುರಕ್ಕೆ ಬಂದು ಬೀಡುಬಿಟ್ಟನು. ಸುಶೀಲೆಯು ಒಂದು ದಿನ ನದಿಗೆ ಸ್ನಾನಕ್ಕೆ ಹೋಗಿದ್ದಾಗ ಗಂಧರ್ವಪೀಡಿತಳಾಗಿ ಮೂರ್ಛಿತಳಾಗುತ್ತಾಳೆ. ಹೇಗೂ ಗುಣವಾಗದೆ ಕೊನೆಗೊಬ್ಬ ಬ್ರಾಹ್ಮಣನಿಂದ ಗುಣ ಹೊಂದಿದ್ದರಿಂದ ಅವನಿಗೇ ಅವಳನ್ನು ಮದುವೆಮಾಡಿ ಮೂವತ್ತೆರಡು ಗ್ರಾಮಗಳನ್ನು ಕೊಟ್ಟು ಅರಮನೆಯನ್ನು ಕಟ್ಟಿಸಿಕೊಟ್ಟು ರಾಜನನ್ನಾಗಿ ಮಾಡಿ ತನ್ನೂರಿಗೆ ಹಿಂತಿರುಗಿದನು. ಆ ಮೇಲೆ ಈ ರಾಜವಂಶದ ಕುಮಾರಿಯರು ಬ್ರಾಹ್ಮಣರನ್ನೇ ಮದುವೆಯಾಗುವ ಪದ್ಧತಿ ನೆಲೆಗೊಂಡಿತು. ಈ ಸುಶೀಲೆಯ ಮಗನೇ ಕವಿಸಿಂಹರಾಜ. ಇವನು ಉಪನಯನವಾದ ಕೂಡಲೇ ಸುಬ್ರಹ್ಮಣ್ಯಕ್ಷೇತ್ರದಲ್ಲಿ ತಪಸ್ಸುಮಾಡಿ

**ಡಾ॥ ಯು. ರಾಮಭಟ್ಟ**

ಅನುಗ್ರಹ ಪಡೆದು ಕುಂಬಳೆ–ಸುಳ್ಯ ರಸ್ತೆಯಲ್ಲಿ ಬೇಳ ಎಂಬಲ್ಲಿಂದ ಎರಡು ಮೈಲು ದಕ್ಷಿಣಕ್ಕಿರುವ ಕುಮಾರಮಂಗಲ ಕ್ಷೇತ್ರವನ್ನು ನಿರ್ಮಿಸಿದನು. ಮಧುವುರಕ್ಕೆ (ಮದವೂರು) ಹೋಗಿ ಮದನೇಶನನ್ನು ಸಂದರ್ಶಿಸಿದನು. ಪಾಂಡ್ಯರಾಜನನ್ನು ಯುದ್ಧದಲ್ಲಿ ಗೆದ್ದು ಧನ ಶೇಖರಿಸಿ ಯಾಗ ಮಾಡಿದನು".

ಕವಿಸಿಂಹ (ಕಬೆಸಿಂಹ–ಸ್ತಂಭ ವಿಶಿಷ್ಟ ಸಿಂಹ) ನ ಉಲ್ಲೇಖ ನಾರಾಯಣ ಪಂಡಿತಾಚಾರ್ಯನು ಬರೆದ ಮಧ್ವವಿಜಯದಲ್ಲಿದೆ. ಮಧ್ವಾಚಾರ್ಯ ಮತ್ತು ತ್ರಿವಿಕ್ರಮ ಪಂಡಿತಾಚಾರ್ಯರ 'ವಾದ' ನಡೆದದ್ದು ಕವಿಸಿಂಹರಾಜನ ಸಮ್ಮುಖದಲ್ಲೇ. ಇದೇ ಕವಿಸಿಂಹನು ಅವನೇ ಅಥವಾ ಇವನ ಪೂರ್ವಜನೇ? ಇದೇ ಕವಿಸಿಂಹನಾಗಿದ್ದರೆ ಇವನ ಕಾಲ ಹದಿಮೂರು ಹದಿನಾಲ್ಕನೆಯ ಶತಮಾನ. ಅಂದರೆ ಈ ಗ್ರಂಥ ರಚನೆಯ ಕಾಲ ಇನ್ನೂ ಈಚೆಗಿರಬೇಕು. ಕುಂಬಳೆರಾಜರ ಸಂತತಿಯೊಂದು ಕುಂಬಳೆ ಸಮೀಪದ ಕೂಡ್ಲುಮ್ಮೆ ಎಂಬಲ್ಲಿ ಈಗಲೂ ಇದೆ. ಇವರು ತಮ್ಮ ಹಿರಿಯರ ಹೆಸರಲ್ಲಿ 'ಕವಿಸಿಂಹ' ಎಂಬುದನ್ನೂ ಹೇಳುತ್ತಾರೆ. 'ವೇಲಾಪುರ ಮಾಹಾತ್ಮ್ಯ'ದಲ್ಲಾಗಲೀ ಕವಿಸಿಂಹನ ಅನಂತರದವರ ಹೆಸರಿಲ್ಲ. ಈ ಎರಡು ಗ್ರಂಥಗಳಲ್ಲಿ ಬಂದಿರುವ ಕವಿಸಿಂಹ ಒಬ್ಬನೇ ಆದಲ್ಲಿ ಐಲ, ಕುಮಾರಮಂಗಲ ಕ್ಷೇತ್ರಗಳು ಹದಿನಾಲ್ಕನೆಯ ಶತಮಾನದವಾಗುತ್ತವೆ. ಮಧೂರು ಕಣ್ವಪುರ ಕ್ಷೇತ್ರಗಳು ಇವಕ್ಕಿಂತ ಹಿಂದಿನವಾಗುತ್ತವೆ. ಈ ಗ್ರಂಥವೂ ಹದಿನಾಲ್ಕನೆಯ ಶತಮಾನದ ಅನಂತರದ್ದಾಗುತ್ತದೆ.

ಸೂತನ ಬಾಯಿಂದ ಕವಿಯು ಕವಿಸಿಂಹ ಮತ್ತು ಪಾಂಡ್ಯರ ಯುದ್ಧವನ್ನು ವರ್ಣಿಸಿದ್ದಾನೆ.

ಕವಿಸಿಂಹನು ಕಾಡುಪ್ರಾಣಿಗಳ ಬಾಧೆ ನಿವಾರಿಸಲು ಬೇಟೆಯಾಡಲು ಹೋದಲ್ಲಿ ಸರ್ಪರೂಪದಲ್ಲಿ ರತಿಕ್ರೀಡೆಯಾಡುತ್ತಿದ್ದ ಮುನಿದಂಪತಿಗಳನ್ನು ಹೊಡೆಯಲಾಗಿ ಪತಿಯು ಸತ್ತು ಪತ್ನಿ ದುಃಖದಿಂದ 'ಭ್ರಷ್ಟರಾಜ್ಯನಾಗು, ಪರಾಜಿತನಾಗೆ'ಂದು ಶಪಿಸಿ ಪಯಸ್ವಿನೀ ತೀರದಲ್ಲಿ ಚಿತೆಯನ್ನು ಸಿದ್ಧಪಡಿಸಿ ಪತಿಯ ಶವದೊಂದಿಗೆ ತಾನೂ ಚಿತೆಯೇರುತ್ತಾಳೆ. ಇಲ್ಲಿ ರಾಮಾಯಣದ ಪ್ರಭಾವ ತೋರುತ್ತದೆ. ಶಾಪಗ್ರಸ್ತನಾದ ರಾಜನೇನು ಮಾಡಿದನೆಂಬ ಪ್ರಶ್ನೆಗೆ ಮತ್ತೆ ಸೂತನು ಉತ್ತರಿಸುತ್ತಾನೆ–

ಮಂಜುಳಪುರಿಗೆ(ಮಂಜೇಶ್ವರ) ಚಂಡಾಲ ನಾಯಕನಾಗಿದ್ದ. ಅಲ್ಲಲ್ಲಿ ಕೋಟೆ ಕಟ್ಟಿ ತನ್ನವರನ್ನು ಸ್ಥಾಪಿಸಿದ. ಮುಗರನೆಂಬವನು ಮೂವತ್ತೆರಡು ಗ್ರಾಮಗಳನ್ನು ತಾನೇ ಆಳಿದನು. (ಮುಗರ–ಮೊಗವೀರ – ಬೆಸ್ತವರ್ಗವಿರಬಹುದು) ಬ್ರಾಹ್ಮಣರಿಗೆಲ್ಲಾ ಇವರು ತೊಂದರೆ ಕೊಡುತ್ತಿದ್ದರು. ಶಾಪಗ್ರಸ್ತನಾದ ಕವಿಸಿಂಹನು ಪೂರ್ವ ದಿಕ್ಕಿಗೆ ಹೋದ. ರಾಮನಾಥಪುರಕ್ಕೆ ಬಂದು (ರಾಮೇಶ್ವರ?) ದೇವರನ್ನು ಸ್ತುತಿಸಿದ. ಈ ರಾಜನಾರೆಂದು ದೇವಾಲಯದ ಶಿಖರದಲ್ಲಿದ್ದ ಹಂಸಿಯು ತನ್ನ ಸಂಗಡಿಗ ಹಂಸದಲ್ಲಿ ಕೇಳುವಾಗ ಅದು ರಾಜನ ಪೂರ್ವಜರಿತ್ರೆಯನ್ನು ಹೇಳುತ್ತದೆ. ಹಂಸದ ಮಾತು ಕೇಳಿದ ರಾಜ ಅದರ ಪರಿಚಯು ಕೇಳುತ್ತಾನೆ. ಅದು ತನ್ನ ಪೂರ್ವ ಕಥೆಯನ್ನು ಹೇಳುತ್ತದೆ– ಮಂದರನೆಂಬ ಗಂಧರ್ವನನ್ನು ಮಹೇಂದ್ರನು ವಸಿಷ್ಠನಲ್ಲಿ ನಡೆಯುವ ಯಾಗಕ್ಕೆ ಕಳುಹಿಸುತ್ತಾನೆ. ಅವನು ಪ್ರಮಾದದಿಂದ, ಅರುಂಧತಿಯೊಡನೆ ಮಲಗಿದ್ದ ವಸಿಷ್ಠನನ್ನು ನೋಡಿದ ಅಪರಾಧಕ್ಕಾಗಿ ರಾಮನಾಥಪುರದಲ್ಲಿ ರಾಮನು ಪ್ರತಿಷ್ಠಿಸಿದ ಶಂಭುವನ್ನು ಆರಾಧಿಸಲು ಹಂಸರೂಪದಿಂದ ಬಂದನು. ನೀನೂ ಈ ದೇವರನ್ನು ಆರಾಧಿಸಿದರೆ ಕಷ್ಟ ಪರಿಹಾರವಾಗುತ್ತದೆ-ಎಂದು ಹೇಳಿ ಹಂಸವು ಗಂಧರ್ವನಾಗಿ ದೇವಲೋಕಕ್ಕೆ ಹೋಯಿತು. ರಾಜನು ಮೂರು ತಿಂಗಳು ತಪಸ್ಸು ಮಾಡಿದಾಗ ದೇವರು ಪ್ರತ್ಯಕ್ಷನಾಗಿ 'ನಾಲ್ವರು ಬ್ರಾಹ್ಮಣರಿಲ್ಲಿ ಬರುತ್ತಾರೆ. ನಿನ್ನ ಇಷ್ಟವನ್ನು ಸಾಧಿಸುತ್ತಾರೆ' ಎಂದು ಕಣ್ಮರೆಯಾದನು. ಆ ನಾಲ್ವರು ಬ್ರಾಹ್ಮಣರೊಂದಿಗೆ ರಾಜನು ರಾಜ್ಯಕ್ಕೆ, ವೇಲಾಪುರಕ್ಕೆ ಬಂದನು. ಬ್ರಾಹ್ಮಣರಲ್ಲಿ ಹಿರಿಯನಾದ ಶಂಕರನೆಂಬುವನು ನದೀದಡದ ಕಾಡಿನಲ್ಲಿ ಉಪಾಸನೆ ಆರಂಭಿಸಿದ. ಕೆಲವುದಿನಗಳಲ್ಲಿ ದೇವಿಯು ಪ್ರತ್ಯಕ್ಷಳಾಗಿ 'ಅಥರ್ವಣ ವಿಧಿಯಿಂದ ಯಾಗದ ಮೂಲಕ ತನ್ನನ್ನು ಆರಾಧಿಸುವಂತೆಯೂ ಆಗ ತಾನು ಕಾಳಿರೂಪ ಧರಿಸಿ ಶತ್ರುಗಳನ್ನು ಸಂಹಾರ ಮಾಡುವುದಾಗಿಯೂ, ಇಲ್ಲಿ ತನ್ನನ್ನು ಪ್ರತಿಷ್ಠಾಪಿಸಬೇಕೆಂದೂ' ಹೇಳಿದಳು. ಆ ಬ್ರಾಹ್ಮಣನು ಹಾಗೆಯೇ ಮಾಡಲು ದೇವಿ ಶತ್ರುಸಂಹಾರ ಮಾಡಿ ಭಂಡಾಸುರನನ್ನು ವಧಿಸಿದಳು.

ಶೌನಕ–ಕಿರಾತರನ್ನು ವಧಿಸಿ ದೇವಿಯು ಶಿವನಲ್ಲಿಗೆ ಹೋದಮೇಲೆ ಕವಿಸಿಂಹನೇನು

ಮಾಡಿದನು? ಸೂತ – "ಶಂಕರನೆಂಬ ಬ್ರಾಹ್ಮಣನು ನದಿಯಲ್ಲಿ ಮುಳುಗಿ ಯೋಗ ಬಲದಿಂದ ದೇವೀವಿಗ್ರಹವನ್ನು ತಂದು ಕೊಟ್ಟನು. ರಾಜನು ಪ್ರತಿಷ್ಠಾಪಿಸಿದನು. ಬ್ರಾಹ್ಮಣರಿಗೆ ಭೂಹಿರಣ್ಯವಸ್ತ್ರಾದಿ ದಾನ ಮಾಡಿ ಶಾಪ ವಿಮುಕ್ತನಾದನು. ಮೂವತ್ತೆರಡು ಗ್ರಾಮಗಳಲ್ಲಿ ಬ್ರಾಹ್ಮಣರು ನೆಲಸಿದರು. ಶಂಕರನಿಗೆ ಈ ಮೂವತ್ತೆರಡು ಗ್ರಾಮಗಳ ತಂತ್ರಾಧಿಕಾರ ಕೊಡಲಾಯಿತು. ಅವನ ತಮ್ಮಂದಿರಿಗೆ ಮಂಜುಳಾಪುರದಲ್ಲಿ ಪ್ರಭುತ್ವವನ್ನು ಕೊಟ್ಟನು, ಪ್ರಜಾನುರಾಗಿಯಾಗಿ ರಾಜ್ಯವಾಳಿದನು." ತುಳುನಾಡಿನ ಈ ಭಾಗದ ಮೂವತ್ತೆರಡು ಗ್ರಾಮಗಳ ಲೆಕ್ಕವನ್ನು ಈ ಊರಿನ ಭೂತಗಳು ಈಗಲೂ ಹೇಳುತ್ತವೆ.

ವೇಲಾಪುರ ಕಥೆಯನ್ನು ಕೇಳುವವರು ಪಾಪ ವಿಮುಕ್ತರಾಗುತ್ತಾರೆ; ಎಂಬ ಫಲಶ್ರುತಿಯೊಂದಿಗೆ ಕೃತಿಯು ಮುಕ್ತಾಯ. ಇದನ್ನು ಯಾರು ಯಾವಾಗ ವಿರಚಿಸಿದರೆಂಬ ವಿವರಣೆಯೇನೂ ಇಲ್ಲ.

ಈ ನಾಡಿನ ಹೊರಗಿನಿಂದ ರಾಜನು ಬಂದುದು, ಇಲ್ಲಿನ ಮೂಲ ನಿವಾಸಿಗಳನ್ನು ಗೆದ್ದುದು, ರಾಜ್ಯಸ್ಥಾಪನೆ ಮಾಡಿದುದು, ಬ್ರಾಹ್ಮಣರನ್ನು ಕರೆತಂದು ನೆಲೆಗೊಳಿಸಿದ್ದು ಇಲ್ಲಿನ ಐತಿಹಾಸಿಕ ಸತ್ಯವಿರಬೇಕು. ಇಲ್ಲಿನ ಮೂಲನಿವಾಸಿ ವರ್ಗದ ಜನ ಕೋಟೆ ಕಟ್ಟಿ ಆಳುತ್ತಿದ್ದರೆಂಬುದಕ್ಕೆ ಅಲ್ಲಲ್ಲಿ ಕಾಣುವ 'ಮಾಯಲಂಕೋಟೆ' (ಮಾಯಲನ ಕೋಟೆ) ಗಳು ಸಾಕ್ಷಿ ನುಡಿಯುತ್ತದೆ. ಮಧೂರು, ಕಾಟುಕುಕ್ಕೆ ಊರುಗಳ ಹತ್ತಿರ ಹಳೆಯ ಮಣ್ಣಿನ ಕೋಟೆ ಅವಶೇಷಗಳಿಗೆ ಈಗಲೂ ಮಾಯಲಂಕೋಟೆ ಎನ್ನುತ್ತಾರೆ. ಹೊರಗಿನಿಂದ ರಾಜರು, ಬ್ರಾಹ್ಮಣರು ಇಲ್ಲಿಗೆ ಬರುವವರೆಗೆ ಇದು ಹಿಂದುಳಿದ ವರ್ಗದವರು ವಾಸಿಸುತ್ತಿದ್ದ ಗುಡ್ಡಗಾಡು ಪ್ರದೇಶವಾಗಿತ್ತು. ಇಲ್ಲಿ ನಾಗರಿಕತೆ ಸಂಸ್ಕೃತಿ ಅಷ್ಟು ಇರಲಿಲ್ಲವೆನ್ನಬಹುದು. ದೇವಿಯು ಉಪಾಸನೆ ಮಂತ್ರ ತಂತ್ರಗಳಿಂದ ವರ್ಗದ ಮುಖಂಡರನ್ನು ಗೆದ್ದ ಕಥೆಯನ್ನು ಈಗಲೂ ಐಲ ದೇವಾಲಯದ ಪರಿಸರದವರು ಹೇಳುತ್ತಾರೆ. ಭಗ್ನವಾದ ಅಲ್ಲಿನ ವಿಗ್ರಹದ ಬದಲು ಇತ್ತೀಚೆಗೆ ಹೊಸತನ್ನು ಸ್ಥಾಪಿಸಲಾಗಿದೆ. ವೇಲಾಪುರ ಮಹಾತ್ಮ್ಯೆಯಲ್ಲಿ ಪ್ರಾಚೀನ ಐತಿಹಾಸಿಕ ಅಂಶಗಳು ಪೌರಾಣಿಕ ರೂಪವನ್ನು ತಾಳಿದಂತೆ ತೋರುತ್ತದೆ. ಈ ಕಥೆ ಯಕ್ಷಗಾನವಾಗಿಯೂ ವಿಜೃಂಭಿಸಿದೆ.

———

(೩ನೇ ಪುಟದಿಂದ)

ಮೇಲೆ ಹೇಳಿರುವ ಸಂಗ್ರಹಗಳು ಕೆಲವು ಮಾತ್ರ. ಸಂಗ್ರಹಗಳ ರಾಶಿ ಅಪಾರವಾದುದು. ಅವುಗಳಲ್ಲಿ ಕೆಲವನ್ನು ಮುಂದೆ ಕೊಟ್ಟಿದೆ. ವೇಣು ದತ್ತನ "ಪದ್ಯವೇಣು", ಘಾತಿ ರಾಮಕವಿಯ "ರಸಚಂದ್ರ", ಭಟ್ಟಭಾಸ್ಕರನ "ರಸ ಪ್ರದೀಪ" ಶುಕ್ಲ ಭುಜೇಶನ "ರಸವಿಲಾಸ", ಭಟ್ಟ ಗೋವಿಂದ ಜಿತನ "ಸಾರಸಂಗ್ರಹ ಸುಧಾರ್ಣವ", ಶಂಭು ದಾಸನ "ಸಾರಸಂಗ್ರಹ", ಭೋಜನ "ಸುಭಾಷಿತ ಪ್ರಬಂಧ", ಚತುರ್ಭುಜನ "ರಸಕಲ್ಪದ್ರುಮ", ಮುಕುಂದನ "ಪದ್ಯಾವಳಿ", ಗೋವಿಂದ ಭಟ್ಟನ "ಪದ್ಯಮುಕ್ತಾವಳಿ", ಕವಿಭಟ್ಟನ "ಪದ್ಯಸಾರ ಸಂಗ್ರಹ" ವೆಂಕಟಾಧ್ವರಿಯ "ಸುಭಾಷಿತ ಕೌಸ್ತುಭ" ಪುರುಷೋತ್ತಮನ "ಸುಭಾಷಿತ ಮುಕ್ತಾವಳಿ", ಭಟ್ಟ ಶ್ರೀಕೃಷ್ಣನ "ಸುಭಾಷಿತ ಪ್ರಬಂಧ" ಮತ್ತು "ಸುಭಾಷಿತ ರತ್ನಕೋಶ", ಭಟ್ಟ ಗೋವಿಂದನ "ಸಾರಸಂಗ್ರಹ ಸುಧಾರ್ಣವ" ಕೆಳದಿ ಬಸಪ್ಪ ನಾಯಕನ "ಸು ಭಾ ಷಿ ತ ಸುರದ್ರುಮ" ಸುಂದರ ದೇವನ "ಸೂಕ್ತಿ ಸುಂದರ" ಇವುಗಳನ್ನು ಹೆಸರಿಸಬಹುದು. ಹಾ ಗೆ ಯೇ ಮುಂದಿನ ಕೆಲವು ಸಂಗ್ರಹಗಳನ್ನೂ ನಿರೂಪಿಸ ಬಹುದು. "ಪ್ರಪಂಚಸಾರ ವಿವೇಕ","ಪ್ರಸ್ತಾವಿಕ ಪದ್ಯಾವಳಿ", "ಸಮಯೋಚಿತ ಪದ್ಯಮಾಲಾ", "ಸೂಕ್ತಿರತ್ನಾಕರ", "ಸಾಹಿತ್ಯರತ್ನ ಮಂಜೂಷ" "ಸುಭಾಷಿತ ಸಂಗ್ರಹ", "ಸಜ್ಜನ ಚಿತ್ರವಲ್ಲಭ" "ಸಾ ಧೂ ಕ್ತಿ ಕರ್ಣಾಮೃತ", "ಸೂ ಕ್ತಿ ರತ್ನಾವಳಿ", "ಕವಿಕರ್ಣಭೂಷಣ", "ಸೂಕ್ತಿ ಸುಭಾಷಿತ", "ಸುಭಾಷಿತ ಸುಧಾನಿಧಿ", "ಕವಿಕೌಮುದಿ" — ಮೊದಲಾದುವುಗಳು ಈಚೆಗೆ ಡಾ॥ ಎಸ್. ಎಸ್. ಅನಂತರಂಗಾ ಚಾರ್ಯರು "ಸೂಕ್ತಿಮಾಲೆ" ಎಂಬ ಸಂಗ್ರಹವನ್ನೂ ಕನ್ನಡ ಸಾಹಿತ್ಯ ಪರಿಷತ್ತಿನವರು 'ಸುಭಾಷಿತ ಮಂಜೂಷ' ಎಂಬ ಸಂಕಲನವನ್ನೂ ಕನ್ನಡ ಅನುವಾದಗಳೊಡನೆ ಪ್ರಕಟಿಸಿದ್ದಾರೆ.

ಸಂಸ್ಕೃತ ಸಾಹಿತ್ಯದಲ್ಲಿ ಬಹು ಆಕರ್ಷ ವಾಗಿರುವ ಸಹಸ್ರಾರು ಸುಭಾಷಿತಗಳಿವೆ. ಒಂದು ಸಾಮಾನ್ಯ ಅಂದಾಜಿನ ಮೇಲೆ ಅವುಗಳ ಪರಿಮಿತಿ ಐವತ್ತು ಸಾವಿರಕ್ಕೆ ಕಡಿಮೆ ಇಲ್ಲವೆಂದು ಹೇಳ ಬಹುದು. ಮಾದರಿಗಾಗಿ ಮುಂದೆ ಕೇವಲ ಶ್ಲೋಕ್ಯೈದುಗಳನ್ನು ಮಾತ್ರ ಪರಿಚಯಿಸಬಹುದು. ವಿದ್ಯೆಯ ಶ್ರೇಷ್ಠತೆ :—

ವಿದ್ಯಾದದಾತಿ ವಿನಯಂ,
ವಿನಯಾದ್ಯಾತಿ ಪಾತ್ರತಾಂ।
ಪಾತ್ರತ್ವಾತ್ ಧನಮಾಪ್ನೋತಿ,
ಧನಾದ್ಧರ್ಮಂ, ತತಸ್ಸುಖಂ॥

(ವಿದ್ಯೆಯು ವಿನಯವನ್ನುಂಟು ಮಾಡುತ್ತದೆ. ವಿನಯದಿಂದ ಗೌರವವು ದೊರೆಯುತ್ತದೆ. ಗೌರವ ದಿಂದ ಧನ ಪ್ರಾಪ್ತಿಯಾಗುತ್ತದೆ. ಧನದಿಂದ ಧರ್ಮವೂ ಧರ್ಮದಿಂದ ಸುಖವೂ ಲಭಿಸುತ್ತದೆ.)

ಅರ್ಥವನ್ನು ಅಗತ್ಯ ಸಂಪಾದಿಸಬೇಕು. ಅದಿಲ್ಲ ದಿದ್ದರೆ ಯಾರಿಂದಲೂ ಗೌರವವಿಲ್ಲ.

ಮಾತಾ ನಿಂದತಿ ನಾಭಿನಂದತಿ ಪಿತಾ
ಭ್ರಾತಾ ನ ಸಂಭಾಷತೇ
ಭೃತ್ಯಃ ಕುಪ್ಯತಿ ನಾನುಗಚ್ಛತಿ ಸುತಾ
ಕಾಂತಾ ಚ ನಾಲಿಂಗತೇ।
ಅರ್ಥಪ್ರಾರ್ಥನ ಶಂಕಯಾ
ನಕುರುತೇ ಸಲ್ಲಾಪ ಮಾತ್ರಂ ಸುಹೃತ್
ತಸ್ಮಾತ್ ಅರ್ಥ ಮುಪಾರ್ಜಯ
ಪ್ರಿಯಸಖೇಹ್ಯರ್ಥೇನ ಸರ್ವೇವಶಾಃ॥

(ಅರ್ಥವಿಲ್ಲದವನನ್ನ ತಾಯಿಯು ಬಯ್ಯುತ್ತಾಳೆ. ತಂದೆಯು ಪ್ರೀತಿಸುವುದಿಲ್ಲ. ಸಹೋದರರು ಮಾತನಾಡಿಸುವುದಿಲ್ಲ. ಆ ಳು ಕೋ ಪಿ ಸಿ ಕೊಳ್ಳುತ್ತಾನೆ. ಹೆಂಡತಿಯು ಆಲಿಂಗನವನ್ನೂ ಮಾಡಿಕೊಳ್ಳುವುದಿಲ್ಲ. ಹಣವನ್ನು ಕೇಳುತ್ತಾ ನೆಂಬ ಶಂಕೆಯಿಂದ ಸ್ನೇಹಿತನು ಸಲ್ಲಾಪಗಳನ್ನು ಮಾಡುವುದಿಲ್ಲ. ಆದುದರಿಂದ ಎಲೈ ಪ್ರಿಯ ಮಿತ್ರನೇ; ಅರ್ಥವನ್ನು ಸಂಪಾದಿಸು. ಅರ್ಥದಿಂದ ಎಲ್ಲರೂ ವಶರಾಗುತ್ತಾರೆ.)

ಜನಸಾಮಾನ್ಯರಲ್ಲಿ ಪ್ರ ತಿ ಯೊ ಬ್ಬ ರೂ ಮತ್ತೊಬ್ಬನನ್ನು ಆಶ್ರಯಿಸುವುದು ತಮ್ಮ ಕಾರ್ಯ ಸಾಧನೆಗಾಗಿ ಮಾತ್ರ. ಅದಿಲ್ಲದಿದ್ದರೆ ಯಾರೂ ಯಾರನ್ನೂ ಲಕ್ಷಿಸುವುದಿಲ್ಲ:—

ವೃಕ್ಷಂ ಕ್ಷೀಣಫಲಂ ತ್ಯಜಂತಿ ವಿಹಗಾಃ
ದಗ್ಧಂ ವನಂ ಶ್ವಾಪದಾಃ
ಮಾಲಾಂ ಪರ್ಯುಷಿತಾಂ ತ್ಯಜಂತ್ಯಳಿಗಣಾಃ
ಶುಷ್ಕಂ ಸರಸ್ಸಾರಸಾಃ।
ನಿರ್ದ್ರವ್ಯಂ ಪುರುಷಂ ತ್ಯಜಂತಿ ಗಣಿಕಾಃ
ದುಷ್ಟಂ ನೃಪಂ ಮಂತ್ರಿಣಃ
ಸರ್ವೇ ಕಾರ್ಯವಶಾತ್ ಜನೋನುರಮತೆ
ಕಃ ಕಸ್ಯ ಕೋವಲ್ಲಭಃ॥

(ಹಣ್ಣಿಲ್ಲದ ಮರವನ್ನು ಪಕ್ಷಿಗಳು ತ್ಯಜಿಸಿ ಹೋಗುತ್ತವೆ. ಮೃಗಗಳು ಸುಟ್ಟುಹೋದ ಕಾಡನ್ನು ಬಿಟ್ಟುಹೋಗುತ್ತದೆ. ಬಾಡಿದ ಹೂವನ್ನು ದುಂಬಿಗಳು ಅಗಲುತ್ತವೆ. ಒಣಗಿದ ಸರೋವರವನ್ನು ಸಾರಸ ಪಕ್ಷಿಗಳು ದೂರ ಮಾಡುತ್ತವೆ. ನಿರ್ದ್ರವ್ಯನಾದ ಪುರುಷನನ್ನು ವೇಶ್ಯೆಯರು ಅಗಲಿಹೋಗುತ್ತಾರೆ. ದುಷ್ಟನಾದ ರಾಜನನ್ನು ಮಂತ್ರಿಗಳು ಕೈಬಿಡುತ್ತಾರೆ. ಆದು ದರಿಂದ ಎಲ್ಲರೂ ತಮ್ಮ ಕಾರ್ಯ ಸಾಧನೆಗಾಗಿ ಮತ್ತೊಬ್ಬರನ್ನು ಆಶ್ರಯಿಸುತ್ತಾರೆ. ಇಲ್ಲದಿದ್ದರೆ ಯಾರಿಗೆ ಯಾರು ಆಡಿಯಾಳಾಗುತ್ತಾರೆ?)

ತನ್ನನ್ನು ಅಗಲಿ ಹೋಗುತ್ತಿರುವ ಪ್ರಿಯನಿಗೆ ಏನೆಂದು ಉತ್ತರಿಸಬೇಕೆಂದಿರುವ ಪ್ರಿಯಳ ಸಂದಿಗ್ಧತೆ :—

ಮಾ ಯಾಹೀತ್ಯಪಮಂಗಲಂ
ವ್ರಜ ಕಿಲ ಸ್ನೇಹೇನ ಶೂನ್ಯಂ ವಚಃ
ತಿಷ್ಠೇತಿ ಪ್ರಭುತಾ
ಯಥಾರುಚಿ ಕುರುಷ್ವೇಷಾಪ್ಯು ದಾಸೀನತಾ
ನೋ ಜೀವಾಮಿ ವಿನಾ ತ್ವಯೇತಿ
ವಚನಂ ಸಂಭಾವ್ಯತೇ ವಾ ನ ವಾ
ತನ್ಮಾಂ ಶಿಕ್ಷಯ ನಾಥ
ಯತ್ಸಮುಚಿತಂ ವಕ್ತುಂ ತ್ವಯಿ ಪ್ರಸ್ಥಿತೇ॥

("ಹೋಗಬೇಡಿ" ಎಂಬುದು ಅಮಂಗಲ; "ಹೋಗಿ" ಎನ್ನುವುದು ಸ್ನೇಹಶೂನ್ಯವಾದ ಮಾತು; "ನಿಲ್ಲಿ, ಇಲ್ಲೇ ಇರಿ" ಎನ್ನುವುದು ಆಜ್ಞೆ; "ನಿಮ್ಮ ಇಷ್ಟ ಬಂದಂತೆ ಮಾಡಿ" ಎಂಬುದು ಉದಾಸೀನ ವಾಕ್ಯ; "ನಿಮ್ಮನ್ನು ಬಿಟ್ಟು ನಾನು ಬದುಕಿರಲಾರೆ" ಎಂಬ ಮಾತನ್ನು ನಂಬುವಿರೋ ಇಲ್ಲವೋ ನಾನರಿಯೆ. ಆದುದರಿಂದ ಒಡೆಯ, ನೀವು ಹೊರಟಿರುವಾಗ ಏನು ಹೇಳುವುದು ಉಚಿತವೋ ಅಂತಹ ಮಾತನ್ನು ನೀವೇ ನನಗೆ ಕಲಿಸಿ.)

ಲೋಕದಲ್ಲಿ ಕಂಡುಬರುವ ಅನ್ಯಾಯವನ್ನು ಕಂಡು ನೊಂದ ಭಕ್ತನ ರೋಷವಾಕ್ಯ :—

ಭೂತಿರ್ನೀಚ ಗೃಹೇಷು
ವಿಪ್ರಸದನೇ ದಾರಿದ್ರ್ಯಕೋಲಾಹಲೋ
ನಾಶೋ ಹಂತ ಸತಾಮ ಸತ್ಪಲ
ಜುಷಾಮಾಯುಸ್ಸಮಾನಾಂ ಶತಂ।
ದುರ್ನೀತಿಂ ತವ ವೀಕ್ಷ್ಯ
ಕೋಪದಹನಜ್ವಾಲಾಜಟಾಲೋಪಿ ಸನ್
ಕಿಂ ಕುರ್ವೇ ಜಗದೀಶ ಯತ್ಪುನಃ
ಅಹಂ ದೀನೋ ಭವಾನೀಶ್ವರಃ॥

(ನೀಚರ ಮನೆಯಲ್ಲಿ ಬೇಕಾದಷ್ಟು ಸಂಪತ್ತು, ಸತ್ಪುರುಷನ ಮನೆಯಲ್ಲಿ ಕಡು ಬಡತನ. ಸಜ್ಜನರಿಗೆ ಕ್ಷೀಣಾಯಸ್ಸು, ಕೆಟ್ಟಕೆಲಸ ಮಾಡು ವವರಿಗೆ ನೂರುವರ್ಷ. ನಿನ್ನ ಈ ದುರ್ನೀತಿ ಯನ್ನು ಕಂಡು ಕೋಪಾಗ್ನಿಯ ಜ್ವಾಲೆಗಳಿಂದ ಸುತ್ತುಗೊಂಡವನಾಗುತ್ತೇನೆ. ಅ ದ ರೇ ನು ? ನೀನು ಈಶ್ವರ, ನಾನು ದೀನ.)

(ಮುಂದಿನ ಪುಟನೋಡಿ)

## ವಾರ್ತಾಲಹರಿ

## ತಿ. ತಿ. ದೇ. ಗಳ ೮೬-೮೭ರ ಆಯವ್ಯಯ ಅಂದಾಜು ೨.೬೨ ಕೋಟಿ ರೂ. ಉಳಿತಾಯ

ತಿರುಮಲೆ ತಿರುಪತಿ ದೇವಸ್ಥಾನಗಳ ಟ್ರಸ್ಟ್ ಬೋರ್ಡ್ 1986–87ಕ್ಕಾಗಿ 2.62 ಕೋಟಿ ರೂಗಳ ಉಳಿತಾಯದ ಆಯವ್ಯಯ ಅಂದಾಜು ಪಟ್ಟಿಯನ್ನು ಅಂಗೀಕರಿಸಿದೆ. 1985–86 ರಲ್ಲಿಗಿಂತಲೂ 1.94 ಕೋಟಿ ರೂಗಳ ಹೆಚ್ಚು ಆದಾಯವಾದ 57.73 ಕೋಟಿ ರೂಗಳ ಒಟ್ಟು ಆದಾಯವನ್ನು 1986–87ರಲ್ಲಿ ಅಂದಾಜಿಸಲಾಗಿದೆ.

ನಿರೀಕ್ಷಿತ 57.73 ಕೋಟಿ ರೂಗಳ ಆದಾಯದಲ್ಲಿ ಹುಂಡಿಯಿಂದ 21.31 ಕೋಟಿ ರೂ ಲಡ್ಡು ವಡೆ, ಆರ್ಜಿತಸೇವೆಯ ಟಿಕೆಟ್ ಮಾರಾಟದಿಂದ 12.65 ಕೋಟಿ ರೂ, ಸತ್ರಗಳು, ಕಲ್ಯಾಣಕಟ್ಟೆ, ಕ್ಯಾಂಟೀನ್‌ಗಳಿಂದ 10.95 ಕೋಟಿ ರೂಗಳೆಂದು ವಿಭಾಗಿಸಲಾಗಿದೆ.

ಆಯವ್ಯಯ ಪಟ್ಟಿಯ ಆದಾಯದ ಬಾಬ್ತುಗಳಲ್ಲಿ ಬ್ಯಾಂಕ್‌ಗಳಲ್ಲಿ ಠೇವಣಿಯಿಟ್ಟಿರುವ ಹಣದ ಮೇಲಣ ವಾರ್ಷಿಕ ಬಡ್ಡಿ 8.07 ಕೋಟಿ ರೂಗಳೂ ಒಂದಾಗಿದೆ. (60 ಕೋಟಿ ರೂಗಳ ಠೇವಣಿ ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿ ಹಾಗೂ 6 ಕೋಟಿ ರೂಗಳ ಠೇವಣಿ ಸರ್ಕಾರಿ ಖಜಾನೆಯಲ್ಲಿವೆ.)

ಸರ್ಕಾರೀ ಖಜಾನೆಯಿಂದ ಸಾಲಿಯಾನಾ ಶೇ 11.5 ಬಡ್ಡಿ ದೊರೆಯುತ್ತಿದೆಯೆಂದೂ ಇದು ರಾಷ್ಟ್ರೀಕೃತ ಬ್ಯಾಂಕ್‌ಗಳ ಬಡ್ಡಿಯ ದರಕ್ಕಿಂತ ಶೇ ½ ಹೆಚ್ಚಿನದೆಂದೂ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ತಿಳಿಸಿದರು.

1986–87 ರಲ್ಲಿ ಹರಳುಗಳ ಬಂಗಾರದ ಆಭರಣಗಳ ಹರಾಜಿನಿಂದ ಕೇವಲ 75 ಲಕ್ಷ ರೂಗಳ ಆದಾಯವನ್ನು ತೋರಿಸಲಾಗಿದೆ. (1985-86 ರಲ್ಲಿ ಇದು 5 ಕೋಟಿ ರೂಗಳಾಗಿದ್ದಿತು.) ಕಾರಣ ಮುಂಬರುವ ವರ್ಷದಲ್ಲಿ ಬಂಗಾರದಾಭರಣಗಳ ಹರಾಜು ಬಹುಶೀಕ ಇರದು. ಬಡ್ಜೆಟ್ ಸಮಾವೇಶದ ಅಧ್ಯಕ್ಷತೆ ವಹಿಸಿದ್ದ ಆಂಧ್ರಪ್ರದೇಶದ ಮುಜರಾಯಿ ಇಲಾಖಾ ಕಮೀಷನರ್ ಶ್ರೀ ಎಂ. ಕೆ. ಆರ್. ವಿನಾಯಕರು ಈ ಅಂಶವನ್ನು ವಿವರಿಸುತ್ತ "ನಮ್ಮಲ್ಲಿನ ಬಹುಪಾಲು ಸಂಗ್ರಹಿತ ಆಭರಣಗಳ ಹರಾಜು ಮುಗಿದಿದ್ದು, ಮುಂದೆ ಹೊಸದಾಗಿ ಸಂಗ್ರಹವಾಗುವ ಆಭರಣಗಳ ಸಂಗ್ರಹ ಹೆಚ್ಚಿದ ಮೇಲೆ ಅವುಗಳಲ್ಲಿನ ಸಾಂಪ್ರದಾಯಕ ಆಭರಣಗಳಿಂದ ಪ್ರಾಚೀನ ಆಭರಣಗಳ ವಿಂಗಡಣೆ ಆದ ನಂತರವೇ ಹರಾಜು ಮಾಡಬಹುದಾಗಿದೆ" ಎಂದರು.

ಆಯವ್ಯಯ ಪಟ್ಟಿಯ 51 ಕೋಟಿ ರೂಗಳ ವ್ಯಯದಲ್ಲಿ ಕಲ್ಯಾಣಮಂಟಪ, ಕಾಟೇಜುಗಳು, ಸತ್ರಗಳ ನಿರ್ಮಾಣಕ್ಕಾಗಿಯೇ 18.17 ಕೋಟಿ ರೂಗಳನ್ನು ಮೀಸಲಿಡಲಾಗಿದೆ (85–86ರಲ್ಲಿ ಇದಕ್ಕಾಗಿ 12.21 ಕೋಟಿ ರೂಗಳನ್ನು ತೆಗೆದಿಡಲಾಗಿದ್ದಿತು.) ತಿ. ತಿ. ದೇ. ದೇವಾಲಯಗಳಿಗಾಗಿ 9.71 ಕೋಟಿ ರೂಗಳು, ವ್ಯವಸ್ಥೆಯ ವೆಚ್ಚಗಳಿಗಾಗಿ 8.71 ಕೋಟಿ ರೂಗಳು, ಶಿಕ್ಷಣಕ್ಕೆ 4

---

(ಹಿಂದಿನ ಪುಟದಿಂದ)

ಎಲ್ಲ ಕಾರ್ಯಗಳನ್ನು ಬಿಟ್ಟು ಭಗವಂತನನ್ನು ಧ್ಯಾನಮಾಡಬೇಕು:–

ಶತಂ ವಿಹಾಯ ಭೋಕ್ತವ್ಯಂ,
ಸಹಸ್ರಂ ಸ್ನಾನಮಾಚರೇತ್ ।
ಲಕ್ಷಂ ವಿಹಾಯ ದಾತವ್ಯಂ
ಕೋಟಿಂ ತ್ಯಕ್ತ್ವಾ ಹರಿಂ ಸ್ಮರೇತ್ ॥

(ನೂರು ಕೆಲಸವನ್ನು ಬಿಟ್ಟು ಊಟ ಮಾಡಬೇಕು. ಸಹಸ್ರ ಕೆಲಸವನ್ನು ಬಿಟ್ಟು ಸ್ನಾನ ಮಾಡಬೇಕು. ಲಕ್ಷ ಕೆಲಸವನ್ನು ಬಿಟ್ಟು ದಾನ ಮಾಡಬೇಕು. ಕೋಟಿ ಕೆಲಸವನ್ನು ತ್ಯಜಿಸಿ ಹರಿಸ್ಮರಣೆ ಮಾಡಬೇಕು.)

ಇಂತಹ ಸುಭಾಷಿತಗಳು ಸಂಸ್ಕೃತ ಸಾಹಿತ್ಯದಲ್ಲಿ ಅನಂತವಾಗಿವೆ. ಅವುಗಳೊಂದೊಂದೂ ಅಣಿಮುತ್ತುಗಳು, ಅಮೋಘ ರತ್ನಗಳು, ಅನಂತ ಕಾಲಕ್ಕೆ ಆದರ್ಶ ವಾಕ್ಯಗಳು. ಪ್ರತಿಯೊಬ್ಬನೂ ಆತ್ಮೋದ್ಧಾರಕ್ಕಾಗಿಯೂ ಸಮಾಜೋದ್ಧಾರಕ್ಕಾಗಿಯೂ ಇದನ್ನು ಹೃದ್ಗತಮಾಡಿಕೊಂಡು ಅವನ್ನು ಅನುಷ್ಠಾನಕ್ಕೆ ತಂದರೆ ಲೋಕ ಕಲ್ಯಾಣವಾಗುವುದರಲ್ಲಿ ಸಂದೇಹವಿಲ್ಲ.

---

### ರುಕ್ಮಿಣೀ ದೇವಿ ಅರುಂಡೇಲ್ ನಿಧನ

ವಿಶ್ವವಿಖ್ಯಾತ ಭರತನಾಟ್ಯ ಕಲಾವಿದೆಯೂ, ಮದರಾಸಿನ ಕಲಾಕ್ಷೇತ್ರದ ಸ್ಥಾಪಕ ಅಧ್ಯಕ್ಷೆಯೂ ಆಗಿದ್ದ ಶ್ರೀಮತಿ ರುಕ್ಮಿಣೀದೇವಿ ಅರುಂಡೇಲ್ 24–2–86 ರ ಬೆಳಗಿನ ಜಾವ ತೀರಿ ಕೊಂಡರೆಂದು ತಿಳಿಸಲು ವಿಷಾದವಾಗುತ್ತದೆ. ಅವರಿಗೆ 82 ವರ್ಷಗಳಾಗಿದ್ದವು.

1904 ರ ಫೆಬ್ರವರಿ 29 ರಂದು ಮಧುರೆಯಲ್ಲಿನ ಸಂಪ್ರದಾಯಸ್ಥರ ಕುಟುಂಬದಲ್ಲಿ ಹುಟ್ಟಿದ ರುಕ್ಮಿಣೀದೇವಿ ಬಾಲ್ಯದಲ್ಲೆ ಡಾ॥ ಅನಿಬೆಸೆಂಟ್, ಡಾ॥ ಜಾರ್ಜ್ ಅರುಂಡೇಲ್ ಅವರುಗಳಿಂದ ಪ್ರಭಾವಿತರಾದರು. ಶ್ರೀ ಅರುಂಡೇಲ್‌ರನ್ನು ವಿವಾಹವಾದ ಬಳಿಕ ಥಿಯಾಸಾಫಿಕಲ್ ಸೊಸೈಟಿಯ ಸಾಮಾಜಿಕ ಕಾರ್ಯಗಳಲ್ಲಿ ಭಾಗವಹಿಸುತ್ತ ಆಕೆ ಶ್ರೀ ಪಂದಾನಲ್ಲೂರ್ ಮೀನಾಕ್ಷಿ ಸುಂದರಂ ಪಿಳ್ಳೈ ಅವರಲ್ಲಿ ಭರತನಾಟ್ಯವನ್ನು ಕಲಿತು, ನೃತ್ಯಪ್ರದರ್ಶನಗಳನ್ನು ನೀಡುತ್ತ 1936 ರಲ್ಲಿ ಕಲಾಕ್ಷೇತ್ರವನ್ನು (ಮೊದಲಿಗೆ ಇಂಟರ್ ನ್ಯಾಷನಲ್ ಅಕ್ಯಾಡಮಿ ಆಫ್ ಆರ್ಟ್ಸ್) ಸ್ಥಾಪಿಸಿದರು.

ಟೈಗರ್ ವರದಾಚಾರ್ಯ, ವೀಣಾ ಕೃಷ್ಣಮಾಚಾರ್ಯ, ಮೈಸೂರು ವಾಸುದೇವಾಚಾರ್ಯ, ಪ್ರೊ॥ ಎಂ. ಡಿ. ರಾಮನಾಥನ್ ಮೊದಲಾದ ಖ್ಯಾತನಾಮರೆಲ್ಲ ಕಲಾಕ್ಷೇತ್ರದ ಶಿಕ್ಷಣರಂಗದಲ್ಲಿ, ಕಾರ್ಯಾಂಗದಲ್ಲಿ, ಯಶಸ್ವಿಯಾಗಿ ದುಡಿದವರು. ಶಾರದಾಹಾಫ್‌ಮನ್, ಯಾಮಿನಿ ಕೃಷ್ಣಮೂರ್ತಿ, ಧನಂಜಯನ್ ಮೊದಲಾದವರೆಲ್ಲ ಅಲ್ಲಿನ ತರಬೇತಿ ಪಡೆದವರು.

1956 ರಲ್ಲಿ ಭಾರತ ಸರಕಾರದ ಪದ್ಮಭೂಷಣ ಪ್ರಶಸ್ತಿಯೂ, 1957ರಲ್ಲಿ ಸಂಗೀತ ನಾಟಕ ಅಕ್ಯಾಡಮಿ ಪ್ರಸ್ತಿಯೂ, ರವೀಂದ್ರಭಾರತಿ ವಿಶ್ವವಿದ್ಯಾಲಯದ ಡಿ. ಲಿಟ್. ಪ್ರಶಸ್ತಿ (1969) ಯೂ, 1984 ರಲ್ಲಿ ಮಧ್ಯಪ್ರದೇಶದ ಕಾಳಿದಾಸ ಸಮ್ಮಾನ ಪ್ರಶಸ್ತಿಯೂ ಆಕೆಗೆ ಜಗತ್ತು ನೀಡಿದ ಹಲವಾರು ಪ್ರಶಸ್ತಿಗಳಲ್ಲಿ ಕೆಲವು.

ಶ್ರೀಮತಿಯವರ ಅಗಲುವಿಕೆಯಿಂದ ಭಾರತೀಯ ಸಾಂಸ್ಕೃತಿಕಾಕಾಶದಲ್ಲಿನ ನಕ್ಷತ್ರವೊಂದು ಕಳಚಿದೆಯೆಂದು ಭಾವಿಸಲಾಗಿದೆ.

**ಮುಂದಿನ ಸಂಚಿಕೆಯಲ್ಲಿ .... .... ....**

**ಸಪ್ತಗಿರಿ. ಏಪ್ರಿಲ್ — 1986**

**ತ್ಯಾಗರಾಜರ ಶ್ರೀರಾಮ** – ಡಾ॥ ವಿ.ಎಸ್. ಸಂಪತ್ಕುಮಾರಾಚಾರ್ಯ

**ಮಾಸ್ತಿಯವರ ಶ್ರೀರಾಮಪಟ್ಟಾಭಿಷೇಕ** – ಚಿ.ನಂ. ಕೃಷ್ಣಮೂರ್ತಿ

**ಲಕ್ಷ್ಮಣೋ ಲಕ್ಷ್ಮೀಸಂಪನ್ನಃ** – ಡಾ॥ ಎಸ್. ಅನಂತರಂಗಾಚಾರ್

**ಜೈನರಾಮಾಯಣದ ರಾವಣ** – ದೇವನೂರು ಪಾಂಡುರಂಗ

**ವಿಯೋಗ ವಿಭಾವರಿ** – ಬಿ. ರುಕ್ಮಿಣಿ

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದಲ್ಲೂ ಬರೆಯಬೇಕು. ಬರೆಯಿರಿ – ವೆಲ್‌ಫೇರ್ ಆಫೀಸರ್ ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ.

# ತಿಂಗಳಿನ ಮುಖ್ಯದಿನಗಳು

## ಏಪ್ರಿಲ್ 1986

| | | |
|---|---|---|
| 10. | ಗುರುವಾರ | ಉಗಾದಿ |
| 14. | ಸೋಮವಾರ | ತಮಿಳು ಉಗಾದಿ |
| 18. | ಶುಕ್ರವಾರ | ಶ್ರೀರಾಮನವಮಿ |
| 22. | ಮಂಗಳವಾರ | ತಿರುಮಲೆಯಲ್ಲಿ ವಸಂತೋತ್ಸವಾರಂಭ |
| 23. | ಬುಧವಾರ | ನಾಗಲಾಪುರದಲ್ಲಿ ಶ್ರೀ ವೇದನಾರಾಯಣಸ್ವಾಮಿ ಬ್ರಹ್ಮೋತ್ಸವಾರಂಭ |
| 24. | ಗುರುವಾರ | ತಿರುಮಲೆಯಲ್ಲಿ ವಸಂತೋತ್ಸವ ಸಮಾಪ್ತಿ, ಚಂದ್ರಗ್ರಹಣ |
| 27. | ಭಾನುವಾರ | ಶ್ರೀ ವೇದನಾರಾಯಣಸ್ವಾಮಿ ಗರುಡೋತ್ಸವ |
| 30. | ಬುಧವಾರ | ಶ್ರೀ ವೇದನಾರಾಯಣಸ್ವಾಮಿ ರಥೋತ್ಸವ. |

# ಗಮನಿಕೆ

ವಿವಿಧಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ. ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ.

* ಸಪ್ತಗಿರಿಯನ್ನು ಕೋರುವವರು ಪ್ರತಿ ತಿಂಗಳಿನಲ್ಲಿ 15 ನೇ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು. ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ.

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸಚಂದಾ' ಎಂದು ಬರೆಯಬೇಕು. ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು. ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ.

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು.

**ವೆಲ್‌ಫೇರ್ ಆಫೀಸರ್**
ಪಬ್ಲಿಕೇಷನ್ ಸೆಕ್ಷನ್
ಟಿ. ಟಿ. ಡಿ.
ತಿರುಪತಿ–517501

Edited and Published on behalf of the T. T Devasthanams by K. Subba Rao, M.A., and Printed at T. T. D. Press by M. Vijayakumar Reddy, Manager, T. T. D. Press, Tirupati – 517501.

